# ಕೊಡಗು ಸಂಗಾತಿ

ಜನವರಿ 16 ರಿಂದ 31, 2000 ಪಾಕ್ಷಿಕ ಪತ್ರಿಕೆ (ಪೊನ್ನಿ 1 ರಿಂದ 15, 2000)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K.R. N. N. 240 · ಸಂಪುಟ : 4 ಸಂಚಿಕೆ : 2 ಪುಟಗಳು : 24 ಬೆಲೆ ರೂ. : 6-00







[ವಿವರ ಒಳಪುಟದಲ್ಲಿ]

**ದಿನಾಂಕ 6-1-2000 ದಂದು ಮಂಗಳೂರಿನಲ್ಲಿ ನಡೆದ ಕರಾವಳಿ - 2000 ಉತ್ಸವದಲ್ಲಿ ಪಾಲ್ಗೊಂಡ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಬೆಳಕಾಟ ತಂಡ**

## ದೆಹಲಿ ಗೌಡ ಸಮಾಜ - ಹುತ್ರಿ ಆಚರಣೆ






ದಿನಾಂಕ 5-12-1999ರಂದು ದೆಹಲಿಯ ಕನ್ನಡ ಶಾಲೆಯಲ್ಲಿ 25ನೇ ವರ್ಷದ (Silver Jublee) ಹುತ್ತರಿ ಹಬ್ಬವನ್ನು ದೆಹಲಿ ಹಾಗೂ ಆಸುಪಾಸಿನ ಕೊಡಗು ಮತ್ತು ದ. ಕ. ಜಿಲ್ಲೆಯ ಅರೆಭಾಷೆ ಗೌಡ ಸಮುದಾಯವು ಆಚರಿಸಿತು. ನಿವೃತ್ತ ನ್ಯಾಯಾಧೀಶ ಶ್ಯಾಂ ಸುಂದರ್ ಆಗಮಿಸಿದ್ದರು. ಕಾರ್ಯಕ್ರಮವನ್ನು ಮೂಟೇರ ಮುದ್ದಪ್ಪನವರು ನಿರೂಪಿಸಿದರು. ಚಿತ್ರದಲ್ಲಿ ಜ್ಯೋತಿ ಬೆಳಗಿ ಉದ್ಘಾಟಿಸುತ್ತಿರುವವರು ಮೂರು ದಶಕಗಳಿಂದಲೂ ದಿಲ್ಲಿಯಲ್ಲಿ ವಾಸಿಸುತ್ತಿರುವ ಶ್ರೀಮತಿ ಕುರಿಕಡ ಜಾಜಿ ಗಣಪತಿಯವರು. ದೆಹಲಿ ಗೌಡ ಸಮಾಜದ ಅಧ್ಯಕ್ಷರಾದ ಶ್ರೀ ನಿಡ್ಯಮಲೆ ಮಾಧವ (ಸಾಗರ ವಿಜ್ಞಾನಿ) ಇವರನ್ನು ಕಾಣಬಹುದು.

**"ಜನಾಂಗ ಬಾಂಧವರಿಗೆಲ್ಲರಿಗೂ ದೆಹಲಿ ಅರೆಭಾಷಿಕರ ಹೊಸ ವರ್ಷದ ಶುಭಾಶಯಗಳು"**

## ಮೈಸೂರು ಜಿಲ್ಲಾ ಗ್ರಾಮಾಂತರ ಪ್ರದೇಶ ಕಾಂಗ್ರೆಸ್ ವೀಕ್ಷಕರಾಗಿ ಮಾಜಿ ಮಂತ್ರಿ ಶ್ರೀ ದಂಬೆಕೋಡಿ ಚಿಣ್ಣಪ್ಪ ಆಯ್ಕೆ



ಮೈಸೂರು ಜಿಲ್ಲಾ ಗ್ರಾಮಾಂತರ ಪ್ರದೇಶದ ಕಾಂಗ್ರೆಸ್ ವೀಕ್ಷಕರಾಗಿ ಮಾಜಿ ಸಚಿವ ದಂಬೆಕೋಡಿ ಚಿಣ್ಣಪ್ಪ ಅವರು ಆಯ್ಕೆ ಆಗಿದ್ದಾರೆ. ಇವರು ಅರೆಭಾಷೆ ಗೌಡ ಜನಾಂಗದ ಹಿರಿಯ ಸಮಾಜ ಸೇವಕರು ಆಗಿದ್ದಾರೆ. ಶ್ರೀಯುತರಿಗೆ ಸಂಗಾತಿಯ ನಮನಗಳು.

**ಸಂಪಾದಕಿ**

## ಸಂಗಾತಿ ಬೆಲೆ ಏರಿಕೆ 1-1-2000 ರಿಂದ

ದೈನಂದಿನ ಬೆಲೆ ಏರಿಕೆಯಿಂದಲೂ ಇನ್ನು ಹಲವಾರು ಕಾರಣಗಳಿಂದಲೂ ಅನಿವಾರ್ಯವಾಗಿ ಸಂಗಾತಿ ಬೆಲೆಯನ್ನು ದಿನಾಂಕ 1-1-2000ರಿಂದ ಪತ್ರಿಕೆಯ ಬಿಡಿ ಪ್ರತಿಯನ್ನು ರೂ. 6/-ರಂತೆಯೂ ವಾರ್ಷಿಕ ಚಂದಾ 150/-ರಂತೆಯೂ (ಅಂಚೆ ವೆಚ್ಚ ಸೇರಿ) ನಿಗಧಿ ಪಡಿಸಲಾಗಿದೆ. ಸನ್ಮಾನ್ಯ ಓದುಗರು ಈ ಹಿಂದಿನಂತೆ ಸಹಕರಿಸುವಂತೆ ವಿನಂತಿಸಲಾಗಿದೆ.

**ಸಂಪಾದಕಿ**

## ಶತಮಾನ ಕಂಡ ಮೇರು ಅರೆಭಾಷಿಕನ ಆಯ್ಕೆ

19ನೇ ಶತಮಾನದ ವ್ಯಕ್ತಿಯಾಗಿ ಒಬ್ಬನ ಆಯ್ಕೆ
20ನೇ ಶತಮಾನದ ವ್ಯಕ್ತಿಯಾಗಿ ಒಬ್ಬನ ಆಯ್ಕೆ
20ನೇ ಶತಮಾನದ ಪೂರ್ವಾರ್ಧದಲ್ಲಿ ಒಬ್ಬನ ಆಯ್ಕೆ
20ನೇ ಶತಮಾನದ ಉತ್ತರಾರ್ಧದಲ್ಲಿ ಒಬ್ಬನ ಆಯ್ಕೆ
ತಾವು ಇಷ್ಟ ಪಡುವ / ಮೆಚ್ಚುವ ವ್ಯಕ್ತಿಯ ಹೆಸರನ್ನು ಸೂಚಿಸಿ

**ಸಂಪಾದಕಿ**

 ಒಳನೋಟ






| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ**, 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. ಫೋನ್ : **0821/516771** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ | **ಬೈತಡ್ಕ ಜಾನಕಿ ಬೆಳ್ಯಪ್ಪ**,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : **08272/28047** |
|  ಸಂಗಾತಿ ಚಿಪ್ಪೆ ಲಭ್ಯ | **ಪಾಂಡ್ಯನ್ ಕ್ಯಾಸೆಟ್ ಅಂಗಡಿ**, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ ಫೋನ್ : 08272/29620 |
|  ಕುಶಾಲ ನಗರ | **ಕುಂಬ್ಳಗೌಡನ ಸೋಮಣ್ಣ**, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
|  ಬೆಂಗಳೂರು ಮಹಾನಗರ | **ಅಮ್ಮಾಜೀರ ಪೊನ್ನಪ್ಪ**, 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, ಫೋನ್ :080/6342822 |
|  ಬೆಂಗಳೂರು ಮಹಾನಗರ | **ಕಲ್ಲುಮುಟ್ಲು ಬಸಪ್ಪ**, ನಂ. 233/9, 2ನೇ ಕ್ರಾಸ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,ಫೋನ್ : 080/6549669 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ **-75** ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಗ್ರಂಥಾಲಯಗಳ ಅವಶ್ಯಕತೆ

ಸಾಮಾನ್ಯವಾಗಿ ಗ್ರಂಥಾಲಯಗಳೆಂದರೆ ಕಥೆ ಕಾದಂಬರಿ ಚರಿತ್ರೆ ಭೂಗೋಳ ಮುಂತಾದ ವಿಷಯಗಳ ಪುಸ್ತಕಗಳನ್ನು ಹೊಂದಿರುವ ಪುಸ್ತಕ ಭಂಡಾರವೆಂಬ ಅಭಿಪ್ರಾಯ.

ಆದರೆ ಈ ನವೀನ ಕಂಪ್ಯೂಟರ್ ಯುಗದದಲ್ಲಿ ಅತ್ಯಾಧುನಿಕ ವೈಜ್ಞಾನಿಕ ಸಂಶೋಧನೆಗಳು ಮಾನವನ ಜೀವನವನ್ನು ರೂಪಿಸಿ ಕೊಳ್ಳುವ ಜೀವನೋಪಾಯವನ್ನು ಕಂಡುಕೊಳ್ಳುವ ಯುವ ಜನರು ತಮ್ಮ ಜೀವನವನ್ನು ರೂಪಿಸಲು ಹಲವಾರು ಸ್ಪರ್ಧೆ ಪರೀಕ್ಷೆಗಳಿಗೆ ಕೂತುಕೊಳ್ಳಲು ಬೇಕಾದ ವಿಷಯಗಳ, ಒಂದು ಮಗುವಿನ ಹುಟ್ಟಿನಿಂದ ಪ್ರೌಢಶಾಲೆಯ ವಿದ್ಯಾಭ್ಯಾಸವನ್ನು ಮುಗಿಸುವವರೆಗೆ ಆ ಮಗುವಿನಲ್ಲಿ ಹುದುಗಿರುವ ಜಾಣ್ಮೆಯನ್ನು ಅಭಿವೃದ್ಧಿ ಪಡಿಸುವ ವಿಷಯಗಳನ್ನೊಳಗೊಂಡ ಮಗುವಿನ ಮನಸ್ಸಿನ ಮೇಲೆ ಪರಿಣಾಮವಾಗುವ ವಿಜ್ಞಾನ ಆಧ್ಯಾತ್ಮಿಕ ಮಾನವೀಯತೆಯನ್ನು ಗಳಿಸಿಕೊಳ್ಳಲು ಬೇಕಾದ ಜೀವನದ ಮೌಲ್ಯವನ್ನು ಸಾರುವ ಪುಸ್ತಕಗಳನ್ನು ಹೊಂದುವಂತಾಗಬೇಕು ನಮ್ಮ ಸಾರ್ವಜನಿಕ ಗ್ರಂಥಾಲಯಗಳಲ್ಲಿ ಈ ರೀತಿ ಸೌಲಭ್ಯಗಳಲ್ಲಿ ಜಿಲ್ಲಾ ಕೇಂದ್ರದ ಗ್ರಂಥಾಲಯಗಳು ತಾಲ್ಲೂಕು ಕೇಂದ್ರದ ಗ್ರಂಥಾಲಯಗಳು ಈ ನಿಟ್ಟಿನ ಪುಸ್ತಕ ಭಂಡಾರವನ್ನು ಹೊಂದುವುದರಲ್ಲಿ ಸಫಲವಾಗಲಿಲ್ಲ. ಸಾರ್ವಜನಿಕ ಗ್ರಂಥಾಲಯಗಳನ್ನು ಸ್ಥಾಪಿಸುವುದು ಸರ್ಕಾರದ ಕೆಲಸವೆಂದು ಜನತೆ ತಿಳಿದು ಕೊಂಡರೆ ತಪ್ಪಾಗುತ್ತದೆ.

ಸಮಾಜದ ಪ್ರತಿಯೊಬ್ಬ ಮಗು ಸತ್ಪ್ರಜೆಯಾಗಿ ಬೆಳೆಯಬೇಕಾದರೆ ಆ ಮಕ್ಕಳ ಬೌದ್ಧಿಕ ಬೆಳವಣಿಗೆಗಳಿಗೆ ಬೇಕಾದ ಪುಸ್ತಕಗಳನ್ನು ಒದಗಿಸುವ ಕೆಲಸ ಸಮಾಜಕ್ಕೆ ಸೇರಿದೆ. ಇದಕ್ಕಾಗಿ ಲಯನ್ಸ್ ಕ್ಲಬ್, ರೋಟರಿ ಕ್ಲಬ್‌ಗಳು ಹಾಗೂ ನಮ್ಮ ಸಂಘ ಸಂಸ್ಥೆಗಳು ಮುಂದೆ ಬಂದು ಸರ್ಕಾರದ ಯಾ ಖಾಸಗಿ ಗ್ರಂಥಾಲಯಗಳಿಗೆ ಧನ ಸಹಾಯ ಮತ್ತು ಸಲಹೆಗಳನ್ನು ನೀಡಿ ಮುಂದಿನ ಪ್ರಜೆಗಳು ಉತ್ತಮ ಮಟ್ಟದ ಪ್ರಜೆಗಳಾಗಿ ಬೆಳೆಯುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ಸಂಗಾತಿಯ ಕಳಕಳಿಯ ಮನವಿ.

*********************************************************

## ಹೊಸ ಸಹಸ್ರಮಾನಕ್ಕೆ ಪಾದಾರ್ಪಣೆ

### ಮೈಸೂರಿನಲ್ಲಿ ಕೊಡಗು ಅರೆಭಾಷಿಕ ಮಾಜಿ ಸೈನಿಕರ ಸಂಭ್ರಮ ಜನಾಂಗದ ಸಂಘಟನೆಗೆ ಪಣ

31-12-1999ರಂದು ವಿಶ್ವವೇ ಎದುರು ನೋಡುತ್ತಿದ್ದ ಸಹಸ್ರಮಾನದ ಅಂತಿಮ ದಿನದ ಕೊನೆಯ ಕ್ಷಣವನ್ನು ಸಂಭ್ರಮದಿಂದ ಆಚರಿಸಲು ಮನುಷ್ಯ ಜೀವವೆಲ್ಲಾ ತನ್ನದೇ ಆದ ರೀತಿಯನ್ನು ಅನುಸರಿಸಿ 21ನೇ ಶತಮಾನಕ್ಕೆ ಪಾದಾರ್ಪಣೆ ಮಾಡಿಯಾಗಿದೆ. ಪ್ರಪಂಚದ ವಿವಿಧ ಭಾಗಗಳಿಂದ ಆಚರಣೆಯನ್ನು ಜನರೆಲ್ಲಾ ಟಿ.ವಿ. ಚಾನೆಲ್‌ಗಳಲ್ಲಿ ವೀಕ್ಷಿಸಿ ತಾನೂ ಅದರ ಜೊತೆಯಲ್ಲಿ ನಲಿದಾಡಿದ ವಿಷಯಗಳು ಹೊಸದೇನಲ್ಲಾ. ಈ ಒಂದು ಕ್ಷಣವನ್ನು ಸಂಭ್ರಮದಿಂದ ಆಚರಿಸಲು ಮೈಸೂರಿನಲ್ಲಿ ನೆಲೆಸಿರುವ ಅರೆಭಾಷೆ ಗೌಡ ಮಾಜಿ ಸೈನಿಕರು ಹಾಗೂ ಅವರ ಸಂಸಾರ ಮತ್ತು ಅವರ ಅವಲಂಬಿತರು ಮೈಸೂರಿನಲ್ಲಿರುವ ಗೌಡ ವಿದ್ಯಾ ಸಂಘದ ಕಟ್ಟಡದಲ್ಲಿ ಸೇರಿ ಸಂಭ್ರಮದಿಂದ ಆಚರಿಸಿದಲ್ಲದೆ, ಆಚರಣೆಯ ಜೊತೆಗೆ ಸಂಘಟನೆಯನ್ನು ಹಮ್ಮಿಕೊಂಡು ಮುಂದೆ ಜನಾಂಗದ ಐಕ್ಯತೆಗೆ ಪಣತೊಟ್ಟಿತು.

ಆ ದಿನ ಸಂಜೆ ಸುಮಾರು 6 ಗಂಟೆಯಿಂದಲೇ ವಿದ್ಯಾ ಸಂಘದ ಆವರಣಕ್ಕೆ ಮಾಜಿ ಸೈನಿಕರು ಹಾಗೂ ಅವರ ಸಂಸಾರಸ್ಥರೂ ಅಲ್ಲದೆ ಕೆಲ ಅತಿಥಿಗಳು ಮಾಜಿ ಸೈನಿಕರ ಕರೆಗೆ ಓಗೊಟ್ಟು ಸುಮಾರು 80ಕ್ಕೂ ಮಿಕ್ಕಿ ಸೇರಿ ತಮ್ಮ ತಮ್ಮ ಸುಖ ಸಂತೋಷವನ್ನು ಹಂಚಿಕೊಳ್ಳುತ್ತಿದ್ದಂತೆ ಸಭಾ ಕಾರ್ಯಕ್ರಮ ಪ್ರಾರಂಭಿಸಲಾಯಿತು. ಸಭೆಯನ್ನು ಉದ್ದೇಶಿಸಿ ಮೊದಲಿಗೆ ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕರೂ, ಕೊಡಗು ಗೌಡ ವಿದ್ಯಾ ಸಂಘದ ಕೇಂದ್ರೀಯ ನಿರ್ದೇಶಕರು, ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ ನಿರ್ದೇಶಕರು ಮತ್ತು ಮಾಜಿ ಸೈನಿಕರೂ ಆದ ಪಟ್ಟಡ ಪ್ರಭಾಕರನವರು ಮಾತನಾಡಿದರು. ನಂತರ ಸಭೆಯನ್ನು ಉದ್ದೇಶಿಸಿ ಕುಯ್ಯಮುಡಿ ರಾಮಪ್ಪನವರು, ಕರ್ಣಯ್ಯನ ಲಕ್ಷ್ಮಣನವರು ಹಾಗೂ ತಡಿಯಪ್ಪನ ಕುಮಾರ ಜಯನವರು ಮಾತನಾಡಿ ಸಹಸ್ರಮಾನದ ಕೊನೆ ಹಾಗೂ ಪ್ರಾರಂಭ ದಿನದಂದು ನಮ್ಮ ಸಮ್ಮಿಲನ ನಿಜಕ್ಕೂ ಜನ ಜಾಗೃತಿ ಮೂಡಿಸಿದೆಯಲ್ಲದೆ ಜನಾಂಗದ ಸಂಘಟನೆಯ ಅಗತ್ಯತೆಯನ್ನು ಒತ್ತಿ ಹೇಳಿದರು. ಅಂದಿನ ಸಭೆಯಲ್ಲಿ ಮಾಜಿ ಸೈನಿಕರ ಸಂಘಕ್ಕೆ ರೂಪು ರೇಖೆ ನೀಡಲು ತೀರ್ಮಾನಿಸಿತ್ತಲ್ಲದೆ, ಸಂಘದ ಧ್ಯೇಯೋದ್ದೇಶವನ್ನು ಸಭೆಗೆ, ಸಭೆಯನ್ನು ಉದ್ದೇಶಿಸಿ ಮಾತನಾಡಿದ ಮಾಜಿ ಸೈನಿಕರುಗಳು ವಿವರಿಸಿದರು. ಆ ದಿನದ ಸಭೆಗೆ ಅಥಿತಿಗಳಾಗಿ ಉಳುವಾರನ ರಮೇಶ್ ದಂಪತಿಗಳು ಆಗಮಿಸಿದ್ದರು. ಕರ್ಣಯ್ಯನ ಲಕ್ಷ್ಮಣನವರು ಮಾಜಿ ಸೈನಿಕರ ಪರವಾಗಿ ಸ್ವಾಗತ ಕೋರಿ ವಂದಿಸಿದರು. ತೆಕ್ಕಡೆ ಧನಂಜಯ ಹಾಗೂ ಮೇರ್‌ಕಜೆ ವಿಶ್ವನಾಥ್ (ರಾಜ) ರವರು ಕಾಡ್ ಬೇಟೆ ಮಾಡಿ ಔತಣ ಕೂಟಕ್ಕೆ ಸಹಕರಿಸಿದರು. ಮಾಜಿ ಸೈನಿಕರೆಲ್ಲರೂ ಆ ದಿನದ ಉಸ್ತುವಾರಿಯನ್ನು ವಹಿಸಿಕೊಂಡಿರುವುದು ಕಾರ್ಯಕ್ರಮದ ವಿಶೇಷವಾಗಿತ್ತು.

ಕಾರ್ಯಕ್ರಮಕ್ಕೆ ಉದಾರ ಸ್ಥಳಾವಕಾಶವನ್ನು ನೀಡಿ ಸಹಕರಿಸಿದ ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷರಾದ ಕುಯ್ಯಮುಡಿ ಪೂರ್ಣಯ್ಯನವರಿಗೂ ಹಾಗೂ ಆಡಳಿತ ಮಂಡಳಿಯವರಿಗೂ ಪ್ರತ್ಯೇಕವಾಗಿ ವಂದನೆಯನ್ನು ಅರ್ಪಿಸಲಾಯಿತು.

ವರದಿ : ತಡಿಯಪ್ಪನ ಕುಮಾರ ಜಯ, ಮೈಸೂರು

*********************************************************

# ವ್ಯಕ್ತಿ ಪರಿಚಯ : ಶ್ರೀ ಜಯರಾಮ ದಂಬೆಕೋಡಿ



ಜಿಲ್ಲಾ ದೈಹಿಕ ಪ್ರಶಸ್ತಿ ವಿಜೇತ ಶ್ರೀ ಜಯರಾಮ ದಂಬೆಕೋಡಿ ಇವರು ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕು ದೇವಚಳ್ಳ ಗ್ರಾಮದ ಕಡ್ಲಾರು (ದಂಬೆಕೋಡಿ) ಎಂಬಲ್ಲಿ ಬೀರಣ್ಣ ಗೌಡರ ದ್ವಿತೀಯ ಪುತ್ರರಾಗಿ ಜನಿಸಿದರು. ಇವರು ಪ್ರಾಥಮಿಕ ಶಿಕ್ಷಣವನ್ನು ಕಂದ್ರಪ್ಪಾಡಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ, ಪ್ರೌಢ ಮತ್ತು ಪದವಿ ಪೂರ್ವ ಶಿಕ್ಷಣವನ್ನು ಸುಬ್ರಮಣ್ಯದಲ್ಲಿ ಮುಗಿಸಿ, ಪದವಿ ಶಿಕ್ಷಣವನ್ನು ಪುತ್ತೂರಿನ ವಿವೇಕಾನಂದ ಕಾಲೇಜಿನಲ್ಲಿ ಮುಗಿಸಿರುತ್ತಾರೆ.

ಬಿ. ಪಿ. ಎಡ್ ಪದವಿಯನ್ನು 1980ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ 10ನೇ ರ್‍ಯಾಂಕಿನೊಂದಿಗೆ ಮುಗಿಸಿರುತ್ತಾರೆ.

1980ನೇ ನವೆಂಬರ್ ತಿಂಗಳಿನಲ್ಲಿ ವೀರಾಜಪೇಟೆ ಸರ್ವೋದಯ ಮಹಿಳೆಯರ ಅಧ್ಯಾಪಕ ತರಬೇತಿ ಕಾಲೇಜಿನಲ್ಲಿ 2 ವರ್ಷ ಸೇವೆಯನ್ನು ಸಲ್ಲಿಸಿ, 1982ನೇ ನವೆಂಬರ್‌ನಿಂದ 1995ನೇ ಮೇ ತನಕ ವೀರಾಜಪೇಟೆ ಸಂತ ಅನ್ನಮ್ಮ ಪ್ರೌಢಶಾಲೆಯಲ್ಲಿ ಖಾಯಂ ಸೇವೆಯನ್ನು ಆರಂಭಿಸಿರುತ್ತಾರೆ. ತಮ್ಮ ಸೇವಾ ಅವಧಿಯಲ್ಲಿ 1987ರಿಂದ 1994ರ ತನಕ ಸತತವಾಗಿ ಬಾಲಕಿಯರ ವಾಲಿಬಾಲ್ ತಂಡವು ಜಿಲ್ಲೆಯನ್ನು ಪ್ರತಿನಿಧಿಸಿ ರಾಜ್ಯ ಮಟ್ಟದಲ್ಲಿ ಭಾಗವಹಿಸಿರುವುದು. ಅದೇ ರೀತಿ ಬಾಲಕ ಮತ್ತು ಬಾಲಕಿಯರ ಟೇಬಲ್ ಟೆನ್ನಿಸ್ ತಂಡವು 5 ಬಾರಿ ಜಿಲ್ಲೆಯನ್ನು ಪ್ರತಿನಿಧಿಸಿ ರಾಜ್ಯ ಮಟ್ಟದಲ್ಲಿ ಭಾಗವಹಿಸಿರುತ್ತಾರೆ. 1988ರಲ್ಲಿ ಪ್ರೌಢಶಾಲಾ ಬಾಲಕಿಯರ ಹಾಕಿ ತಂಡವು ರಾಜ್ಯದಲ್ಲಿ ಪ್ರಥಮ ಸ್ಥಾನವನ್ನು ಪಡೆದುಕೊಂಡಿರುವುದು ಹೆಮ್ಮೆಯ ವಿಚಾರ. ಅಲ್ಲದೆ ಹಲವಾರು ಬಾಲಕ ಬಾಲಕಿಯರು ರಾಜ್ಯ, ರಾಷ್ಟ್ರ ಹಾಗೂ ಅಂತರ್ ರಾಷ್ಟ್ರೀಯ ಮಟ್ಟದ ಸ್ಪರ್ಧೆಗಳಲ್ಲಿ ಪಾಲುಗೊಳ್ಳಲು ಶ್ರೀಯುತರ ಶ್ರಮ ಅಪಾರ.

1995 ಜೂನ್ ತಿಂಗಳಲ್ಲಿ ಸೋಮವಾರಪೇಟೆ ಸಂತ ಜೋಸೆಫರ ಪ್ರೌಢಶಾಲೆಗೆ ವರ್ಗಾವಣೆಗೊಂಡು ಪುನಃ ಸೋಮವಾರಪೇಟೆ ಶಾಲೆಯ ಬಾಲಕಿಯರ ವಾಲಿಬಾಲ್ ತಂಡವು ಸತತ 4ನೇ ಬಾರಿ ಜಿಲ್ಲೆಯನ್ನು ಪ್ರತಿನಿಧಿಸಿ ರಾಜ್ಯಮಟ್ಟದಲ್ಲಿ ಭಾಗವಹಿಸಿದೆ. ಟೇಬಲ್ ಟೆನ್ನಿಸ್, ಶಟಲ್ ಬ್ಯಾಡ್‌ಮಿಂಟನ್‌ನಲ್ಲಿ ಶಾಲೆಯ ವಿದ್ಯಾರ್ಥಿಗಳು ರಾಜ್ಯಮಟ್ಟದಲ್ಲಿ ಭಾಗವಹಿಸಿರುತ್ತಾರೆ. 1998ರಲ್ಲಿ 3 ವಿದ್ಯಾರ್ಥಿನಿಯರು ರಾಜ್ಯವನ್ನು ಪ್ರತಿನಿಧಿಸಿ ರಾಷ್ಟ್ರಮಟ್ಟದಲ್ಲಿ ವಾಲಿಬಾಲ್ ಆಟ ಆಡಿರುತ್ತಾರೆ. ಅದೇ ರೀತಿ ಸೋಮವಾರಪೇಟೆಯಲ್ಲಿ ಸತತ 5ನೇ ವರ್ಷವು ಪ್ರೌಢಶಾಲಾ ವಿದ್ಯಾರ್ಥಿನಿಯರಿಗೆ ಜಿಲ್ಲಾ ಮಟ್ಟದ ವಾಲಿಬಾಲ್ ಪಂದ್ಯಾಟವನ್ನು ಶಾಲಾ ವತಿಯಿಂದ ನಡೆಸಲಾಗುವುದು.

1999-2000ನೇ ಸಾಲಿನ ಕೊಡಗು ಜಿಲ್ಲೆಯ "ಉತ್ತಮ ದೈಹಿಕ ಶಿಕ್ಷಣ" ಪ್ರಶಸ್ತಿ ಲಭಿಸಿರುವುದು ಮತ್ತು ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯವರು 1999ರ ಕೈಲು ಮುಹೂರ್ತ ಕ್ರೀಡಾಕೂಟದಲ್ಲಿ ಸನ್ಮಾನಿಸಿದ್ದಾರೆ. ಇವರು ಭವಿಷ್ಯ ಉಜ್ವಲವಾಗಲೆಂದು ಸಂಗಾತಿ ಶುಭ ಹಾರೈಸುತ್ತದೆ.

ಲೇಖಕ : ಪಟ್ಟಡ ಪ್ರಭಾಕರ

---

## ಗಾದೆಗ

1) ಅಪ್ಪನಂಗೆ ಮಂಜ, ನಾಯಿ ನಂಗೆ ಬಾಲಾ.
2) ಹೆಂಡ ಕುಡ್‌ದವನ ಹೆಮ್ಮೆ ನೋಡೊಕಡ ಬಂಗಿ ಕುಡದವನ ಭಂಗ ನೋಡೊಕಡ.
3) ಆಟಿಂದತ್ತ ಅರೆಗಾಲ ಮಾಯಿಂದತ್ತ ಮಳೆಗಾಲ.
4) ಯಾರ್‌ದೋ ಕಾಸ್ ಯಲ್ಲಮ್ಮನ ಜಾತ್ರೆ.
5) ಗಂಡ ಪಟ್ಟೆಸೀರೆ ತಂದೆದತ ಹೆಣ್ಣ್ ಇದ್ದ ಸೀರೆನ ಸುಟ್ಟತ್‌ಗಡ.
6) ಮಕ್ಕ ಇಲ್ಲದ ಮನೆ ಸ್ಮಶಾನಕ್ಕೆ ಸಮ.
7) ಗೌರಿ ಹಬ್ಬಕ್ಕೆ ಬಾತ್ ಗತಿಗೆಟ್ಟ ಅಳಿಯ, ಮೌರ್ನಾಮಿ ಹಬ್ಬಕ್ಕೆ ಬಾತ್ ಮಾನಗೆಟ್ಟ ಅಳಿಯ.
8) ಒಬ್ಬ ಮಗಳೆಂದ್ ಸಾಕಿ ಕಬ್ಬು ಹೊರುವವನ ಕಟ್ಟಿಕಂಡ್ ಹೋತು.
9) ಮುತ್ತು ಕೊಡುವಳು ಬಾಕಾನ ತುತ್ತು ಕೊಟ್ಟ ಅವ್ವನ ಮರಿಬಡ.
10) ಕೊಕ್ಕರೆಗೊಂದು ಕೆರೆ ಇಲ್ಲೆ, ಮೇಸ್ತ್ರಿಗೊಂದು ಊರಿಲ್ಲೆ
11) ಜಾತಿಗೆ ಜಾತಿಯೇ ವೈರಿ ನೀರಿಗೆ ಪಾಚಿ ವೈರಿ.

ಕೊಳಂಬೆ. ಮಮತ ಲಕ್ಷ್ಮಣ, ಕೊಡಗು

---

## ನಗೆ ಹನಿ

ಸುರೇಶ : ಹೈದ ಗೂಡೆ ಇವರಿಬ್ಬರಲ್ಲಿ ಯಾರ ಜೊತೆ ಇರಲು ನೀನ್ ಇಷ್ಟ ಪಟ್ಟಿಯ?
ದಿನೇಶ : ಗೂಡೆ
ಸುರೇಶ : ಅದೇಕೆ ಹೈದ ಬ್ಯಾಡ?
ದಿನೇಶ : ಛೆ ! ನಾನೇ ಇಬ್ಬರ ಜೊತೆಲಿದ್ದರೆ ನೀನ್ ಒಂಟಿಯಾದಿಯಲ್ಲ!

ಬಿ. ಕೆ. ಶ್ರೀಧರ.

**********************************************

# ನಮ್ಮ NEW YEAR ಪಾರ್ಟಿ

ಈ ಸಲದ New Year ಪಾರ್ಟಿನ ನಾನ್ ಯಾಗೋಳೂ ಮರೆಯಕ್ಕಾದುಲೆ, ಅಂತಾ ಒಂದು ತಮಾಷೆ ನಡ್ತ್. ಹೋದ ವರ್ಷ ನಾವು ಹೈದಂಗ ಎಲ್ಲಾ ಸೇರಿ ಬೈಕ್‌ಗ ತಕಂಡ್ ಊರಾಚೆ ಇರುವ ಡಾಬಕೆ ಹೋಗಿ ಕುಡ್ಟ್, ತಿಂದ್ ಮದ್ಯರಾತ್ರಿ ಹೊತ್ತಿಗೆ ಮನೆಗೆ ಬಂದ್ ಮನೆಯವರ ಕೈಲಿ ಉಗ್ಸಿಕಂಡಿದ್ದೊ. ಈ ಸಲ ಹೊರಗೆಲ್ಲೂ ಹೋದು ಬ್ಯಾಡತೇಳಿಬುಟ್ಟ್ ನಮ್ಮ ಫ್ರೆಂಡ್ ಒಬ್ಬನ ಮನೇಲೇ New Yearನ ವೆಲ್‌ಕಂ ಮಾಡ್ವುತ ಡಿಸೈಡ್ ಮಾಡ್ದೊ. ಅಂವ ಅಪಾರ್ಟ್‌ಮೆಂಟ್ಸ್‌ಲಿರ್ದ್, ಅವನ ಅಪ್ಪ ಅವ್ವ ಬೇರೆ ಊರಿಗೆ ಹೋಗಿದ್ದೊ, ನಮಗೆ ಸಲೀಸಾತ್. ನಮ್ಮ ಗ್ರೂಪ್‌ಲಿ 10ಜನ ಹೈದಂಗ ನಾಲ್ಕ್‌ಗೊಡೆಗ ಪ್ರತಿಯೊಬ್ಬರೂ 100 ರೂಪಾಯಿ ಹಾಕಿ ಚಿಕನ್ ಬಿರ್ಯಾನಿ ಮಾಡಿ, Cool drinks ಮತ್ತೆ ಬೀರ್‌ತಾದುತ ಒಪ್ಪಿಕಂಡೊ.

ಎಂಟ್‌ಗಂಟೆಗೇ ನಾವೆಲ್ಲಾ ಅವನ ಮನೇಲಿ ಸೇರಿ ಆತ್. ಒಂಬತ್ತ್ ಗಂಟೆಗೆ ಬಿರ್ಯಾನಿ ಘಮಘಮಬಾಕೆ ಶುರ್ ಆತ್. ಗೊಡೆಗ ಸೇರಿಬುಟ್ರೆ ಸಾಕ್ ಅವ್ಕೆ ಅಂತ್ಯಾಕ್ಷರಿ ಬುಟ್ರೆ ಬೇರೆ ಎಂತ ಗ್ಯಾನ ಬಾದುಲೆ. ಹೈದಂಗ ಒಂದ್‌ಗ್ರೂಪ್, ಗೊಡೆಗ ಒಂದ್‌ಗ್ರೂಪ್ ಮಾಡಿಕಂಡ್ ಕಿರ್ಚಾಟ ಶುರುಮಾಡ್ದೊ. ಬೀರ್ ಇನ್ನೂ ತಂದಿತ್ಲೆ. ನನ್ನ ಫ್ರೆಂಡ್ ಮತ್ತೆ ನಾನೂ ಬೀರ್ ತಂದ್‌ಬುಡ್ದೊತೇಳಿ ಹೊರ್ಟೊ. ಅಪಾರ್ಟ್‌ಮೆಂಟ್ಸ್‌ಂದ ಬರೀ ಒಂದ್ ಪರ್‌ಲಾಂಗ್ ದೂರಲಿ ಬಾರ್ ಇರ್ದ್. ನಾವ್ ಒಂದ್ ಪ್ಲಾಸ್ಟಿಕ್ ಚೀಲಲಿ 5-6 ಬಾಟ್ಲಿಗಳ್ನ ತಕಂಡ್ ಬಾಕಾಕನ ಎದ್‌ರ್‌ಗಡೆಂದ ಕಿರಿಕ್-ಕಾರಿಯಪ್ಪ ಅಡ್ಡ ಬಂದ್‌ಬುಡ್ತ್. ಸಿಡ್‌ಕ್ ಮುಖದ ಕಾರಿಯಪ್ಪ ಯಾಗ ನೋಡ್ರು ಎಂತಾರ್ ಕಿರಿಕ್ ಮಾಡಿಕಂಡಿರ್ದ್. ಇವಂಗೆ ಜಾಲಿತೇಳ್ರೆ ಎಂತತೇ ಗೊತ್ಲೆ. ಜಾಲಿ ಮಾಡುವ ನಮ್ಮಂತ ಹೈದಂಗಳ್ನ ಕಂಡ್ರೆ ಕಿಡಿ ಕಾರ್ದ್. ಅದೇ ಹೇಳುವೆ ಅಲ 'ಭತ್ತ ಹಾಕಿರೆ ಹೊದ್ರಿ ಬಂದೆತ' ಹಂಗೇ ಅವನ ಮುಖ. ನಮ್ಮ ಬ್ಯಾಗ್‌ಲಿ ಇಣ್‌ಕಿಕಂಡಿದ್ದ ಬಾಟ್ಲೆಗ ಅವನ ಕಣ್ಣಿಗೆ ಬಿದ್ದ್ ಬುಡ್ತ್. ಅಂವ ನನ್ನ ಫ್ರೆಂಡ್‌ನ ಮುಖನೇ ನೋಡಿಕಂಡ್ "ಎಂತರಾ ...ಮನೇಲಿ ಅಪ್ಪ ಅವ್ವ ಇಲ್ಲೆ ತೇಳಿ ನೀನ್ ಆಡ್ದೇ ಆಟನಾ?"ತ ಕೇಳ್ತ್. ನನ್ನ ಫ್ರೆಂಡ್ "ಅದ್... ಅದ್... New Year ಅಲ ಅಂಕಲ್... ಅದಿಕ್ಕೇ..."ತ ತೊದ್ಲಿತ್. "New Year"ತೇಳಿ ಹೈದಂಗ ಎಲ್ಲ ಸೇರಿ ಕುಡಿಯಕ್‌ತ ಯಾರ್ ಹೇಳ್ದ್?"ತ ಕಾರಿಯಪ್ಪ ಸವಾಲ್ ಹಾಕಿತ್.

"ಬರೀ ಬೀರ್ ಅಂಕಲ್... ಬಿರಿಯಾನಿನೂ ಮಾಡಿಯೊ... ನೀವೂ ಬನ್ನಿ ಅಂಕಲ್"ತ ನನ್ನ ಫ್ರೆಂಡ್ ಕಾರಿಯಪ್ಪಂಗೆ ಆಸೆ ತೋರ್ಸಿತ್.

'ಸುಟ್ಟಂವ ಯಾಕಾದ್ರು ಸಿಕ್ಕಿತೂ'ತ ನಾನ್ ಮನ್‌ಸಲೇ ಕಾರಿಯಪ್ಪನ ಬೈಕಂಡೆ. ಕಾರಿಯಪ್ಪ ಗಡ್ಡ ಕೆರ್ಕಂಡ್ "ಹ್ಞ... ಕಳ್ಳ.. ಬಿರಿಯಾನಿನಾ?.... ನಾನ್ ಎಂತಕರಾ ಮಕ್ಕಳ ಮಧ್ಯಲಿ?..... ನೀವ್ ಮಜಾಮಾಡಿ."ತೇಳಿ ಬುಟ್ಟ್ ಅಲ್ಲಿಂದ ಹೊರ್ಟತ್.

ಇನ್ಯಾರಾರ್ ನೋಡುವೊತೇಳಿ ನನ್ನ ಫ್ರೆಂಡ್ ಬೀರ್ ಬಾಟ್ಲಿಗಳ್ನ ಸಲ್ಪ ಅಮ್‌ಕಿ ಅಡಗಿಸಿತ್". ಆ ಕಿರಿಕ್ ಕಾರಿಯಪ್ಪ ನಿಮ್ಮ ಪಪ್ಪಂಗೆ ಎಂತಾರ್ ಚಾಡಿಹೇಳುದಾ?" ತೇಳಿ ನಾನ್ ಕೇಳ್ದೆ. "ಹೇಳ್ರೆ ಹೇಳಿಕಂಡ್ಲಿ... ನಾನ್ ಕುಡ್ದನೆತ ಪಪ್ಪಂಗೆ ಹೆಂಗಿದ್ರೂ ಗೊತ್ತುಟು. ಪಪ್ಪ ಮಮ್ಮಿ ಊರಿಗೆ ಹೋಕನ ಪಪ್ಪ ನಂಗೆ ಎಂತ ಹೇಳಿ ಹೋದೂ ಗೊತ್ತುಟಾ?... ಈ ಸಲ New Yearತ ನೆಪ ಮಾಡಿ 'ಜಾಸ್ತಿ' ಕುಡೀಬ್ಯಾಡತ ಹೇಳ್ತ್. ಅಂದ್ರೆ ಸಲ್ಪ ಕುಡಿಯಕೆ Permission ಕೊಟ್ಟಂಗೆ ಆತಲೆ" ತೇಳಿಕಂಡ್ ಫ್ರೆಂಡ್ ನೆಗಾಡ್ತ್. ನಾವಿಬ್ಬರೂ ಇನ್ನ್ ಯಾರಾದರ್ ನೋಡಿ ಬುಟುವೊತೇಳಿಬುಟ್ಟ್ ಬೇಗ ಬೇಗ ನಡ್‌ಕಂಡ್ ತರ್ಡ್ ಫ್ಲೋರ್‌ಲಿದ್ದ ಅವನ ಮನೆ ಸೇರಿಕಂಡೊ. ಬೀರ್ ಬಂದ ತಕ್ಷಣ ಅಂತ್ಯಾಕ್ಷರಿಗೆ ಅಡಚಣೆ ಉಂಟಾತ್. ನಮ್ಮ ಗುಂಪ್‌ಲಿ ದಿವ್ಯ ಬೊಮ್ಮನ್ ಆದ್ರೂನೂ ಚಿಕನ್ ಕಬಾಬ್ ಸೂಪರ್ ಆಗಿ ಮಾಡ್ದೆ. ಅವ್ಳ ಬಿಸಿ ಬಿಸಿ ಕೆಂಪು ಕಬಾಬ್ ತಟ್ಟೇಲಿ ಹಾಕ್ಕಂಡ್ ಬಾತ್. ಮೋಹನ್ ಬೀರ್‌ನ ಗ್ಲಾಸ್‌ಗಳಿಗೆ ಹುಯ್ತ್. ಅಂವ ನಮ್ಮ ಗುಂಪ್‌ದ್ ಪೀವಟ್, ಅದಿಕ್ಕೆ ಕರೆಕ್ಟ್ ಅಳ್ತೆಮಾಡಿಹುಯ್ದದೆ. ಎಲ್ಲವ್‌ಕು ಬೀರ್ ಗ್ಲಾಸ್ ಹಂಚಿ ಆತ್. ನಿಮ್ಮಿ ಉರ್ಫ್ ನಿರ್ಮಲ್ ಎಲ್ಲವ್‌ಕಿಂತ ಸಣ್ಣವ್ಳ. ಇನ್ನೂ ಈಗ ತಾನೇ ಕಾಲೇಜ್ ಮೆಟ್ಲ್ ಹತ್ತಿರವ್ಳ. ಅವ್ಳೂ ಬೀರ್ ತಕಂಡದ್ನ ನೋಡಿ ವೇಲು "ವ್ಹಾ... ಇದೇನಿದು?.. ನಿಮ್ಮಿ ಕೈಲಿ ಬೀರು?"ತೇಳಿ ಕೇಳ್ತ್... ನಿರ್ಮಲ "So what? Beer is a womens drink you know?"ತೇಳಿ ಸವಾಲ್ ಹಾಕಿ ಒಂದ್ ಸಿಪ್ ತಕಂಡತ್, "ತೂ... ಇದೇನು ಇಷ್ಟ್ ಕಹಿ ಉಟ್ಟು"ತ ಮುಖ ಕಿವಿಚಿಕಂಡತ್.... ನಾವೆಲ್ಲಾ ಜೋರಾಗಿ ನೆಗಾಡ್ದೊ..." ಹಹ... ಬಿಯರ್ ಪೆಪ್ಸಿನಂಗಿದ್ದದೆತ ಗ್ಯಾನ ಮಾಡ್ದಾ?"ತೇಳಿ ರೇಗ್ಸಿದೆ. ಡಾಕ್ಟರ್ ಆಲ್ಬನ್- its my wife ಹಾಡ್ ನಮಿಗೆಲ್ಲ ಹೊಸ ಹುರುಪು ಹುಟ್ಟಿಸಿತ್. ಗರಂ ಗರಂ ಚಿಕನ್ ಕಬಾಬ್, ಬಿಯರ್ ಹೊಟ್ಟೆಗೆ ಹೋಗ್ತಾ ಇದ್ದಂಗೆ ಹೊಸ ಹೊಸ ಡಾನ್ಸ್ ಸ್ಟೆಪ್‌ಗಳ ಶುರು ಆತ್.

ಅಷ್ಟೊತ್ತಿಗೆ ನಿಮ್ಮಿ ಅವ್ಳ ಗ್ಲಾಸ್‌ನ ಮೋಹನಂಗೆ ಕೊಟ್ಟ್ ಒಂದು ಹೊಸ ಆಟ ಶುರುಮಾಡ್ತ್. ಚೀಟಿ ಎತ್ತಿಬುಟ್ಟ್ ಅದರ್ಲಿ ಬರ್ದಂಗೆ ಮಾಡೊಕು. ಸರಿ ಆಟ ಶುರು ಆತ್. ಫಸ್ಟ್ ದಡಿಯಾ ಲಕ್ಷ್ಮೀನಾರಾಯಣ ಚೀಟಿ ಎತ್ತಿತ್. ಅವಂಗೆ ಭರತನಾಟ್ಯ ಮಾಡುಕುತ ಬಾತ್. ಆಹಾಹ... ಅವನ ತಾಂಡವ ನಾಟ್ಯ ನೋಡಿಕೆ ನೂರ್ ಕಣ್ಣ್ ಸಾಲದಾತ್. ವೆಂಕಟೇಶ್‌ಗೆ ಹುಚ್ಚನಂಗೆ ಆಕ್ಟ್ ಮಾಡೊಕುತ ಬಾತ್. ಅಂವಂಗೆ ಕುಡ್ಸಿಕೆ ನಿಜವಾಗಿ ಹುಚ್ಚನೆ, ನಮ್ಮ ಗಾಂಧಿಮರಿ ಗೋಪಿಗೆ ಗೊಡೆಗೆ Propose ಮಾಡುತ ಬಾತ್. ಅಂವನ ಮುಖ ಅದ್ನ ಓದಿ ಕೆಂಪಾತ್. ನಮ್ಮ ಗೊಡೆಗೆ ನಾ ಮುಂದೆ ತಾಮುಂದೆತ ವಾಲೆಂಟೀರ್ ಆದೊ. ಅವನ ಪೇಚಾಟ ನೋಡಿ ನಾವು ಜೋರಾಗಿ ನೆಗಾಡಿಕೆ ಶುರುಮಾಡ್ದೊ. ಆಗ ಹೊರಗೆಂದ ಇನ್ನೂ ಜೋರಾಗಿ ಯಾರೋ ಚಪ್ಪಾಳೆ ಹೊಡ್ಕಂಡ್ ನೆಗಾಡ್ತಿರುವ ಶಬ್ದ ಕೇಳಿಬಾತ್. ಇಡೀ ಬಿಲ್ಡಿಂಗ್‌ಲಿ ನಾವೇ New Year ಆಚರಿಸ್ತಾ ಇರ್ದುತಾ ಗ್ಯಾನ ಮಾಡಿದ್ದ

---

ನಮ್ಗೆಲ್ಲಾ ಆಶ್ಚರ್ಯ ಆತ್. ನಾವೆಲ್ಲಾ ಸೈಲೆಂಟ್ ಆಗಿ ಆಲ್ಸಿದೊ. ನೆಗಾಡುವ ಸದ್ದ್ ನಮ್ಮ ಎದುರು ಗಡೆ ಇದ್ದ ನಾಯರ್ ಅಂಕಲ್ ಮನೆಂದ ಬರ್ತಾ ಇತ್ತ್. ನೋಡೊನೊ ಅವು ಎಂತ ಮಾಡ್ತಾ ಒಳೊತೇಳಿ ನಾನ್ ಹೋಗಿ ಬಾಗ್ಲ್ ತೆಗ್ದೆ. ನೋಡ್ರೆ ನಮ್ಮ ಕಿರಿಕ್ ಕಾರಿಯಪ್ಪ ಮುಖ ಚಪ್ಪೆ ಮಾಡಿಕಂಡ್ ಬೆಪ್ಪನಂಗೆ ನಿತ್ತುಟ್ಟು. ನಾಯರ್ ಅವನ ಹೆಣ್ಣ್, ಮತ್ತೆ ಒಂದು ಹತ್ತ್ ಜನ ನೆಂಟ್ರು ಎಲ್ಲ ಅವನ ನೋಡಿಕಂಡ್ ಬಿದ್ದ್ ಬಿದ್ದ್ ನೆಗಾಡ್ತಾ ಒಳೊ.

ಅಷ್ಟೊತ್ತಿಗೆ ನನ್ನ ಫ್ರೆಂಡ್ಸ್ ಎಲ್ಲವೂನೂ ಸಹ ಹೊರಗೆ ಬಂದಿದ್ದೊ. ನಾವೆಲ್ಲ ಅರ್ಥ ಆಗದೆ ಒಬ್ಬರ ಮುಖ ಒಬ್ಬರ್ ನೋಡಿಕಂಡೊ. ನನ್ನ ಫ್ರೆಂಡ್ "ಯಾಕೆ ನಾಯರ್ ಅಂಕಲ್....ಎಂತಾತ್?"ತ ನಾಯನರ್ ಕೇಳ್ತ್. ಅಂವ ಕಷ್ಟಲಿ ನಗೆ ತಡ್ಕಂಡ್ "ಅಲ್ಲಾ ... ಈ ಕಾರಿಯಪ್ಪನಿಗೆ ಎಂತ ಆಯ್ತು ಅಂದ ಗೊತ್ತಿಲ್ಯ. ಇವರ್ Dog ಮಾದ್ರಿ ನಡೆದುಕೊಂಡು ಬಂದು ಕತ್ತೆ ಮಾದ್ರಿ ಕಿರಿಚಿದ್ದು...ಹಹ"ತ ಮಳೆಯಾಳಿ ಮಿಶ್ರಿತ ಕನ್ನಡಲಿ ಹೇಳಿ ಪುನಃ ನೆಗಾಡಿಕೆ ಶುರುಮಾಡ್ತ್. ಕಾರಿಯಪ್ಪ ನಾಯಿ ತರಹ ನಡ್ಕಂಡ್, ಕತ್ತೆ ತರಹ ಕಿರ್ಚಿತಾ...? ನಮ್ಗೆ ಎಂತ ಅರ್ಥ ಆಗದೆ ಕಾವೇರಪ್ಪನ ಕಡೆ ನೋಡ್ದೊ. ಆಗ ಕಾವೇರಪ್ಪ ಬೆವರ್ ವರ್‍ಸಿಕಂಡ್ ಹೇಳ್ತ್. "ಮಕ್ಕಳೇ...ನೀವೆಲ್ಲಾ ನಾನ್ strict ತೇಳಿಬುಟ್ಟ್ ಸುಮಾರ್ ಸಲ ನನ್ನ ಬೈಕಂಡಿದ್ದರೆ. ಮನೇಲಿ ನನ್ನ ಮಕ್ಕಸನ ನಂಗೆ, ಯಾಕೆ ಹಿಂಗೆ ಮುಖ ಗಂಟ್ಹಾಕಿಕಂಡ್ ಇದ್ದಿಯ ಯಾಗೋಳುತ ಬೈತಿದ್ದೊ. ಅದಿಕ್ಕೆ ಈ ಹೊಸ ವರ್ಷಕ್ಕೆ ನಾನ್ ಸಿಟ್ಟ್ ಬುಟ್ಟು ನಿಮಗೆಲ್ಲವುಕು ಇಷ್ಟ ಆಗುವ ಜಾಲಿ ಅಂಕಲ್ ಆಕುತೇಳಿ Resolution ಮಾಡ್ದೆ. ಅದಿಕ್ಕೆ ನಿಮ್ಗೆಲ್ಲಾ surprise ಮಾಡೊಕುತೇಳಿ ನಾನ್ ಬೆಲ್ ಮಾಡಿ ಅಂಬೆಗಾಲ್‌ಲಿ ಕುದ್ದ್‌ಕಂಡ್ ಬಾಗಿಲ್ ತೆಗ್ದ್. ತಕ್ಷಣ ಕಣ್ಣ್ ಕೆಕ್ಕರಿಸಿಕಂಡ್ ಕತ್ತೆನಂಗೆ ಕಿರ್‍ಚಿ ಬುಟ್ಟೆ... ತೆಲೆ ಎತ್ತಿ ನೋಡ್ರೆ ನಿಮ್ಮ ಮನೆತ ಮಿಸ್ಟೇಕ್ ಮಾಡಿಕಂಡ್ ನಾಯರ್ ಮನೆದ್ ಬೆಲ್ ಮಾಡಿಬುಟ್ಟಿದೆ. ಇವೆಲ್ಲಾ ಹೆದ್ರಿ ಹೋದೋ ಏನೋ.. ಬಾಯಿಬುಟ್ಟ್‌ಕಂಡ್ ನೆನ್ನನ್ನೇ ನೋಡ್ತಾ ನಿತ್ತ್‌ಬುಟ್ಟೊ.... ನಾಯರ್ ಸಾರ್... ಐ ಆಮ್ ರಿಯಲಿ ವೆರಿ ಸಾರಿ" ತೇಳ್ತ್.

ನಮ್ಗೆ ಇದ್ನ ಕೇಳಿ ನೆಗಾಡೊಕೊ, ಮರ್‍ಗೊಕುತ ಗೊತ್ತಾತ್ಲೆ. ಆಗ ನಾಯರ್ ಮುಂದೆ ಬಂದ್ ಕಾರಿಯಪ್ಪನ ತಬ್ಬಿಕಂಡ್ "ಹಹಹ....ಕಾರಿಯಪ್ಪ... Your resolution is really very good. ನಮಕೆ ಇನ್ನ್ ಮುಂದೆ ನೀವೇ ನೆಗಾಡ್ತಾ ಇರ್‍ವೀರಿ ಅಂದ ಕೇಳಿ ದುಂಬಾ ಸಂದೋಷ ಆಯ್ತು. ..."ತೇಳೇ. ನಾಯರ್ ಅಂಕಲ್ ನಮ್ಮನೆಲ್ಲಾ ಒಳಗೆ ಕರ್‍ಕಂಡ್ ಹೋಗಿ cake ಮತ್ತೆ wine ಕೊಟ್ಟೊ. ಕಾರಿಯಪ್ಪ Resolution ಮಾಡ್ತಕ್ಕೆ ನಾವೆಲ್ಲವೂ ಒಂದೊಂದು Resolution ಮಾಡಿಕಂಡ್ ಅದ್ನ ಒಂದು ಚೀಟಿಲಿ ಬರ್‍ದ್ ನಾಯರ್ ಅಂಕಲ್ ಮನೇಲಿರುವ ಸೀಲ್ಡ್ ಬಾಕ್ಸ್ ಒಳಗೆ ಹಾಕಿಯೊಳೊ. ಬರುವ ವರ್ಷ ಅದ್ನ ಓಪನ್ ಮಾಡಿ ನೋಡುವೆ. ಆಗ ಎಷ್ಟರಮಟ್ಟಿಗೆ ಅದ್ನ ಪಾಲಿಸಿಕಂಡ್ ಬಂದೊಳೊತ ಗೊತ್ತಾದೆ.

ನಾವ್ಯಾರೂ ಮುಖ ಗಂಟಾಕಿಕಂಡಿರ್‍ಕಾಗದ್. ನಗು ಜೀವನದ ಒಂದು ಮುಖ್ಯವಾದ ಅಂಗ. ಮುಖ ಎಷ್ಟೇ ವಿಕಾರ ಆಗಿದ್ರೂನೂ ನಾವು ನೆಗಾಡ್‌ಕಾಕನ ಲಾಯ್ಕ ಕಂಡದೆ. ಅದಿಕ್ಕೆ ಹೊಸ ವರ್ಷಕೆ ನಮ್ಗೆಲ್ಲಾ ಎಂತ ಕಷ್ಟ ಬಂದರೂ ನೆಗಾಡಿಕಂಡ್ ಅದ್ನ ಎದುರುಸುವೆತೇಳಿ ಎಲ್ಲವೂ ಪ್ರತಿಜ್ಞೆ ಮಾಡ್ನೊ ಅಲಾ !

**ಎಡಿಕೇರಿ ಸುದರ್ಶನ, ಬೆಂಗಳೂರು**

---

## ವಿದ್ಯೆ ಕಲೆಕು

ಬನ್ನಿ ಸಣ್ಣಮಕ್ಕನೀವು
ವಿದ್ಯೆ ಕಲೆಕೆ ಶಾಲೆಗೆ
ವಿದ್ಯೆ ಕಲ್ತರುಟ್ಟುಗೊತ್ತೊ
ನಮ್ಮ ಮುಂದೆ ನೇಳಿಗೆ।
ವಿದ್ಯೆಯಿಂದ ಬಾಧುನಾವ್ಗೊ
ಸಕಲ ಸಂಪತ್ತಿಗೆ
ಅದರ ಕಲ್ತ್ ತುಂಬಿ ಮೆರೆಕು
ಬಾಳ್‌ಂ ತೇಳ್ವ ಬಿಂದಿಗೆ।
ಶಾಲೆ ಒಳಗೆ ಗುರುಗ ನಾವು
ಮಾಡುವಂತ ಬೋಧನೆ
ಅದರ ಕಲಿಸಿ ಕಷ್ಟಪಟ್ಟ್
ಮಾಡಿನೀವು ಸಾಧನೆ।
ವಿದ್ಯೆ ಕೊಡುವ ಗುರುಗ ಇರುವೊ
ಮಕ್ಕಳವರ ಜತೆಗೆನೆ
ಮಕ್ಕಳಿಗೆ ಕಲಿಸಿಕೊಡುವ
ಗುರುವೆ ನಿಮಗೆ ವಂದನೆ।
ಸತ್ಯಧರ್ಮ ಶಾಂತಿ ಇರುವ
ಕಾಲ ಕಳ್ದ್ ಹೋಗುಟು
ಕಳ್ಳ ಕಪಟ ಮೋಸ ಮಾತ್ರ
ಜನರಲಿಂದ್ ತುಂಬಿಟು।
ವಿದ್ಯೆ ಕಲ್ತ್ ಬುದ್ಧಿವಂತ
ರಾಗಿ ನಾವು ಬಾಳದೆ
ಕದ್ದ್ ತಿಂಬ ಕಳ್ಳತನನ
ಕಲಿದೆ ಬೇಡ ಮರಿಯದೆ।
ನಮ್ಮಲಿರುವ ಹೀನ ಬುದ್ಧಿ
ನಮ್ಮ ಸೋಲಿಗೆ ಕಾರಣ
ಅದರ ಬುಟ್ಟ್ ಕಟ್ಟಿ ನಿಲಿಸಿ
ಜ್ಞಾನದೆಲೆದ್ ತೋರಣ।
ವಿದ್ಯಾವಂತರಿರುವ ಮನೆಲಿ
ಅವರ ಬಾಳ್ ನಂದನ
ಹೆತ್ತ ಅವ್ವ ಮುತ್ತು ಕೊಟ್ಟ್
ಸಾಂಕಿದಾಂಗೆ ಕಂದನ।।

**ಪದ್ಯ ರಚನೆ : ಹೊದ್ದೆಟಿ ಭವಾನಿ ಶಂಕರ್**

✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻

# ಕೊಡ್‌ಗ್ ಗೌಡ ಸಾಂಸ್ಕೃತಿಕ ಅಕಾಕಡೆಮಿ ವತಿಂದ

## ತಾರೀಖ್ 31-12-99 ರಂದ್ ಮಡಿಕೇರಿಯಲ್ಲಿ ಮಿಲ್ಲೆನಿಯಂ - 2000 ಆಚರಣೆ

ಕೊಡ್‌ಗ್ ಗೌಡ ಸಾಂಸ್ಕೃತಿಕ ಅಕಾಡೆಮಿ ವತಿಂದ ತಾರೀಖ್ 31-12-99 ರ ಶುಕ್ರವಾರ ರಾತ್ರೆ 9-00 ಗಂಟೆಗೆ ಸರಿಯಾಗಿ ಮಡಿಕೇರಿ ಗೌಡ ಸಮಾಜಲಿ "ಮಿಲ್ಲೇನಿಯಂ 2000" ಪ್ರಯುಕ್ತ "ಆದರ್ಶ ದಂಪತಿ" ಮತ್ತೆ "ಫ್ಯಾಶನ್ ಶೋ" ಸ್ಪರ್ಧೆಗಳ್ನ ಜನಾಂಗ ಬಾಂದವ್‌ಕೆ ಏರ್ಪಾಡ್ ಮಾಡಿದ್ರೊ.

"ಆದರ್ಶ ದಂಪತಿ" ಸ್ಪರ್ಧೆಲಿ ಸೂರ್ತಲೆ ಸೋಮಣ್ಣ ಮತ್ತೆ ಕವಿತಾ ದಂಪತಿಗ ಒಂದನೆ ಬಹುಮಾನ ಆದ ಅಕಾಡೆಮಿ ವತಿಂದ ನೀಡ್‌ದ ಒಂದ್ ಪವನ್ ಚಿನ್ನ ಮತ್ತೆ ಸೂಧನ ಚಂದ್ರಪ್ರಕಾಶ್ ಮತ್ತೆ ಉಮಾ ದಂಪತಿಗ ನೀಡ್‌ದ ಟ್ರೋಫಿನ ಪಡ್‌ಕಂಡೊ. ಎರಡ್ನೆ ಬಹುಮಾನನ ಕುಂಜಿಲನ ಸತೀಶ್ ಜಮುನಾ ದಂಪತಿಗ ಅಕಾಡೆಮಿ ವತಿಂದ ನೀಡ್‌ದ ಅರ್ಧ ಪವನ್ ಚಿನ್ನ ಮತ್ತೆ ಉಳ್‌ವಾರನ ದಿವಂಗತ ಆನಂದ ಅವ್ರ ಜ್ಞಾಪಕಾರ್ಥ ಅವರ ಮಂಜ ಉಳ್‌ವಾರನ ನವೀನ್ ಅವ್ ನೀಡ್‌ದ ಟ್ರೋಫಿನ ಪಡ್‌ಕಂಡೊ.

ಗೂಡೆಗಳ "ಫ್ಯಾಶನ್ ಶೋ" ಸ್ಪರ್ಧೆಲಿ ಒಂದನೆ ಬಹುಮಾನನ ತಳೂರ್ ರಮ್ಯ ಆನಂದ್ ಅವ್ ಅಕಾಡೆಮಿ ವತಿಂದ ನೀಡ್‌ದ 2000 ರೂಪಾಯಿ ಮತ್ತೆ ಹೊಸ್ಕೇರಿ ಗ್ರಾಮದ ಕಾಫೀ ಬೆಳೆಗಾರರಾದ ಮಂಡೀರ ದೇವಯ್ಯನವ್ ನೀಡ್‌ದ ಟ್ರೋಫಿನ ಪಡ್‌ಕಂಡೊ. ಎರಡ್ನೆ ಬಹುಮಾನನ ತುಂತಜೆ ಲತ ಉಲ್ಲಾಳ್‌ನವ್ ಅಕಾಡೆಮಿ ವತಿಂದ ನೀಡ್‌ದ 1000 ರೂಪಾಯಿ ಮತ್ತೆ ಟ್ರೋಫಿನ ಪಡ್‌ಕಂಡೊ.

ಹೈದಂಗಳ "ಫ್ಯಾಶನ್ ಶೋ" ಸ್ಪರ್ಧೆಲಿ ಒಂದನೆ ಬಹುಮಾನನ ಸಬ್ಬಂಡ್ರ ಜಗದೀಶ್ ಅವ್ ಅಕಾಡೆಮಿ ವತಿಂದ ನೀಡ್‌ದ 2000 ರೂಪಾಯಿ ಮತ್ತೆ ಮೂರ್ನಾಡ್ ಕಾಫೀ ವ್ಯಾಪಾರಸ್ಥ ಆದ ಉಳ್‌ವಾರನ ನವೀನ್ ಅವ್ ನೀಡ್‌ದ ಟ್ರೋಫಿನ ಪಡ್‌ಕಂಡೊ. ಎರಡ್ನೆ ಬಹುಮಾನನ ಪುಳಕಂಡ್ರ ಪ್ರದೀಪ್ ತಿಮಯ್ಯ ಅವ್ ಅಕಾಡೆಮಿ ವತಿಂದ ನೀಡ್‌ದ 1000 ರೂಪಾಯಿ ಮತ್ತೆ ಟ್ರೋಫಿನ ಪಡ್‌ಕಂಡೊ.

ಗೂಡೆಗಳ ಫ್ಯಾಶನ್ ಶೋ ಸ್ಪರ್ಧೆಲಿ ಗೆದ್ದವ್‌ಕೆ "ಮಿಸ್ ಗೌಡ ಅಕಾಡೆಮಿ" ಹೈದಗಳ ಫ್ಯಾಶನ್‌ಶೋ ಸ್ಪರ್ಧೆಲಿ ಗೆದ್ದವ್‌ಕೆ "ಮಿಸ್ಟರ್ ಗೌಡ" ಅಕಾಡೆಮಿ ತ್ತೇಳ್ವ್ ಬಿರದ್ ನೀಡಿ ಗೌರವಿಸಿದೊ.

ಅಕಾಡೆಮಿ ವತಿಂದ ನೀಡ್‌ದ ಬಹುಮಾನನ ಕ್ರಮ ಆಗಿ ಅಕಾಡೆಮಿ ಅಧ್ಯಕ್ಷ ಆದ ತುಂತಜೆ ಗಣೇಶ್, ಕಾರ್ಯದರ್ಶಿಯಾದ ಕೋಡಿ ಚಂದ್ರಶೇಖರ್, ಉಪಾಧ್ಯಕ್ಷ ಆದ ಹುದೇರಿ ನಾಗೇಶ್, ನೈಯಣಿ ಹೇಮಲತ ತಾರೇಂದ್ರ, ನಿರ್ದೇಶಕರ್‌ಆದ ಪುಳಕಂಡ್ರ ಮುತ್ತಪ್ಪ ನವ್ ಕೊಟ್ಟೊ. ಈ ಸಂಧರ್ಭಲಿ 1999 ನೇ ಸಾಲ್‌ಲಿ ಜಿಲ್ಲಾ ಯುವ ಪ್ರಶಸ್ತಿನ ಪಡ್‌ಕಂಡಿದ್ದ ಚೆಂಬ್ ಗ್ರಾಮದ ಸೋರಂಜ ಚಂಗಪ್ಪ ಅವರನ್ನ ಅಕಾಡೆಮಿ ವತಿಂದ ಅಧ್ಯಕ್ಷ ಆದ ತುಂತಜೆ ಗಣೇಶ್‌ನವ್ ಶಾಲ್ ಹೊದ್ಸಿ ನೆನ್‌ಪ್‌ನ ಕಾಣಿಕೆ ನೀಡಿ ಸನ್ಮಾನ ಮಾಡ್ರೊ.

ಆದರ್ಶ ದಂಪತಿ ಸ್ಪರ್ಧೆಲಿ ಸುತ್ತ ಮುತ್ತ ಸುತ್‌ನ ಬಹುಮಾನನ ಕ್ರಮ ಆಗಿ ಕಾವೇರಿ ಗಿಫ್ಟ್ ಸೆಂಟರ್‌ನ ಕಡ್ಲೇರ ಪ್ರಭು, ಕಟ್ಟೆಮನೆ ಪ್ರೇಮಗಣೇಶ್, ಶ್ರೀ ಎಲೆಕ್ಟ್ರಾನಿಕ್ಸ್‌ನ ಮುಕ್ಕಾಟಿ ರವಿ, ಹೋಟೆಲ್ ಅಮೃತ್‌ನ ಪೈಕೇರ ನಂದ, ಹೋಮ್ ಪೆರಿಯನ್ಸ್‌ನ ಪೇರಿಯನ ಶ್ಯಾಮ್, ಹೈ ಫ್ಯಾಶನ್‌ನ ಅಂಬೆಕಲ್ ಶ್ಯಾಮ್ ಕುಶಾಲಪ್ಪ, ಕಳುವಾಜೆ ಪ್ರಸನ್ನ ತಿಮ್ಮಪ್ಪ ಗೌಡ, ತುಂತಜೆ ನಾಗೇಶ್, ವಿಘ್ನೇಶ್ವರ ಎಲೆಕ್ಟ್ರಿಕಲ್ಸ್‌ನ ಕುಂಜಿಲನ ಸತೀಶ್, ಕುಯ್ಯಮುಡಿ ಕೆ. ಪೂರ್ಣಯ್ಯ ಚಂದ್ರಮ್ಮ, ಮತ್ತೆ ಅರುಣ್ ಸ್ಟೋರ್‌ನ ರಮೇಶ್ ನವ್ ಪ್ರಾಯೋಜಿಸಿದ್ರೊ.

ಆದರ್ಶ ದಂಪತಿ ಕಾರ್ಯಕ್ರಮನ ಮದೆ ಮದೇಶ್ವರ ಕಾಲೇಜಿನ ಉಪನ್ಯಾಸಕ ಆದ ಬಾರಿಯಂಡ ಜೋಯಪ್ಪನವ್ ಮತ್ತೆ ಫ್ಯಾಶನ್ ಶೋ ಕಾರ್ಯಕ್ರಮನ ಮಡಿಕೇರಿ ಆಕಾಶವಾಣಿದ್ ಕಟ್ಟೆಮನೆ ಸೋನಜಿತ್ ನಡ್ಸಿಕೊಟ್ಟೊ. ಸ್ಪರ್ಧೆಗಳ ತೀರ್ಪ್‌ಗಾರರಾಗಿ ಜಿಲ್ಲಾ ಪಂಚಾಯತ್ ಇಂಜೀನಿಯರ್ ಕುಂಬುಗೌಡನ ರವಿ, ಯುವಜನ ಸೇವಾ ಮತ್ತೆ ಕ್ರೀಡಾಧಿಕಾರಿ ಚಂಡೀರ ಚಿಣ್ಣಪನವ್, ಪಿ.ಡಬ್ಲ್ಯು.ಡಿ. ಕಂಟ್ರಾಕ್ಟರ್ ಸೂಧನ ಚಂದ್ರಪ್ರಕಾಶ್, ಗೌಡ ವಿದ್ಯಾ ಸಂಘದ ಕಾರ್ಯದರ್ಶಿ ಕೋಳಿ ಮಡಿಯನ ಅನಂತ್ ಕುಮಾರ್, ರಂಗೋಲಿ ಗಾರ್ಮೆಂಟ್ಸ್‌ನ ಅಯ್ಯೇಟಿ ದಿನೇಶ್, ಎಸ್.ಬಿ.ಎಂ.ನ ರತ್ನಾವತಿ ಮತ್ತೆ ಮರ್‌ಗೋಡ್‌ನ ಕಾಫೀ ಬೆಳೆಗಾರರ್ ಆದ ಕಟ್ಟೆಮನೆ ಪ್ರೇಮ ಗಣೇಶ್ ಕಾರ್ಯ ನಿರ್ವಹಿಸಿದ್ರೋ.

ಕಾರ್ಯಕ್ರಮದ ಸುರ್‌ಂದ ಕಡೆ ತನ್ಕ ಇದ್ದ ಜನಾಂಗದ ಪ್ರಮುಕರ್ ಆದ ಮಾಜೀ ಶಾಸಕ ದಂಬೆಕೋಡಿ ಮಾದಪ್ಪನವ್ ಜನಾಂಗ ಬಾಂದವರ್ನ ಉದ್ದೇಶಿಸಿ ನಾಕ್ ಮಾತಾಡ್‌ದೊ. ಮಧ್ಯ ರಾತ್ರಿ ೧೨ ಗಂಟೆಗೆ ಸರಿಯಾಗಿ ಹೊಸ ಸಹಸ್ರಮಾನನ ಆಕಾಡೆಮಿಯ ಗೌರವಾಧ್ಯಕ್ಷ ಕುಯ್ಯಮುಡಿ ಕೆ. ಪೂರ್ಣಯ್ಯನವ್ ದೀಪ ಹೊತ್‌ಸಿ ಸ್ವಾಗತಿಸಿದೊ.

ಹೈದಗಳ ಫ್ಯಾಶನ್ ಶೋ ಸ್ಪರ್ಧೆಲಿ ಬಹುಮಾವ ಪಡ್ದ ಸಬ್ಬಂಡ್ರ ಜಗದೀಶ್‌ನವ್ ಅವ್ರುಕ್ಕೆ ಸಿಕ್ಕಿದ ೨೦೦೦ ರೂಪಾಯಿ ಬಹುಮಾನನ ಗೌಡ ವಿದ್ಯಾಸಂಘಕ್ಕೆ ದಾನ ಮಾಡ್ರೊ.

ವರದಿ : ಕೋಡಿ ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ



ದಿನಾಂಕ 31-12-99 ರಂದ್ ಮಡಿಕೇರಿಲಿ ನಡ್‌ದ ಆದರ್ಶ ದಂಪತಿಗ ಕಾರ್ಯಕ್ರಮಲಿ ಪ್ರಥಮ ಬಹುಮಾನ ಗಳಿಸಿದ ಸೂರ್ತಲೆ ಸೋಮಣ್ಣ ಕವಿತಾ ದಂಪತಿಗ ತಮ್ಮ ಮಕ್ಕಳೊಟ್ಟಿಗೆ.

✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻



ದಿನಾಂಕ 31-12-99 ರ ಕೊನೆ ಗಳಿಗೇಲಿ ದೀಪ ಹೊತ್ತಿಸಿ 2000ದ ಇಸ್‌ವಿಗೆ ಜನಾಂಗದ ಪರವಾಗಿ ಶುಭಕೋರಿ ಸ್ವಾಗತಿಸುದ್ ಶ್ರೀಮಾನ್ ಕುಯ್ಯಮುಡಿ ಪೂರ್ಣಯ್ಯನವು. ಕುಸಿಲಿ ನೋಡ್ತಾ ಇರ್ದು ಮಾಜಿ ಶಾಸಕ ದಂಬೆಕೋಡಿ ಮಾದಪ್ಪ, ಅಕಾಡೆಮಿ ಉಪಾಧ್ಯಕ್ಷ ಹುದೇರಿ ನಾಗೇಶ್ ಮತ್ತೆ ಪ್ರಧಾನ ಕಾರ್ಯದರ್ಶಿ ಕೋಡಿಚಂದ್ರಶೇಖರ್.



ದಿನಾಂಕ 31-12-99 ರಂದ್ ಮಿಲ್ಲೆನಿಯಂ 2000 ಪ್ರಯುಕ್ತ ಆದರ್ಶ ದಂಪತಿಗ. ಕಾರ್ಯಕ್ರಮನ ನಡೆಸಿಕೊಡ್ತಾ ಇರ್ದು ಚಿತ್ರಲಿ ಸೂರ್ತಲೆ ಸೋಮಣ್ಣ ಮತ್ತೆ ಕವಿತಾ ದಂಪತಿಗ ಹಂಗನೆ ಕುಂಜಿಲನ ಸತೀಸ್ ಮತ್ತೆ ಜಮುನ ದಂಪತಿಗಳಿಗೆ ಪ್ರಶ್ನೆಗಳನ್ನ ಕೇಳ್‌ತ್ತಿರುವ ಬಾರಿಯಂಡ ಜೋಯಪ್ಪನವು.



ಅಕಾಡೆಮಿ ವತಿಂದ ನಡ್ದ ಗೂಡೆಗಳ ಫ್ಯಾಶನ್ ಷೋ ಸ್ಪರ್ಧೆಲಿ ಸಾಂಪ್ರದಾಯಿಕ ಉಡುಗೆಲಿ ಕೊಡಗಿನ ಗೌಡವತಿಯರು ಸಾಲಾಗಿ ನಿಂತ ದೃಶ್ಯ.



ಹೈದಂಗಗಳಿಗೆ ನಡ್‌ದ ಫ್ಯಾಶನ್ ಷೋ ಸ್ಪರ್ಧೆಲಿ ಗೆದ್ದಂವ ಸಬ್ಬಂಡ್ರ ಜಗದೀಶ್ ಇಂವನ ಸನ್ಮಾನಿಸುದ್ ಅಕಾಡೆಮಿ ಅಧ್ಯಕ್ಷ ತುಂತಜೆ ಗಣೇಶ್‌ನವು.

## ಕರಾವಳಿ ಉತ್ಸವಲಿ ಕೊಡ್‌ಗ್ ಗೌಡ ಸಾಂಸ್ಕೃತಿಕ ಅಕಾಡೆಮಿಂದ ಬೆಳಕಾಟ ಹೊರನಾಡ್‌ಲಿ ಪ್ರಥಮಬಾರಿಗೆ ಪ್ರದರ್ಶನ

ತಾರೀಖ್ ೬-೧-೨೦೦೦ ದಂದ್ ಮಂಗಳೂರ್‌ನ ಮಂಗಳ ಕ್ರೀಡಾಂಗಣಲಿ ಸುರ್ ಆದ ಕರಾವಳಿ ಉತ್ಸವ ಲಿ ಕೊಡ್‌ಗ್ ಜಿಲ್ಲೆಂದ ಒಂದೇ ಒಂದು ತಂಡ ಆದ ಕೊಡ್‌ಗ್ ಗೌಡ ಸಾಂಸ್ಕೃತಿಕ ಅಕಾಡೆಮಿಯ ಬೆಳಕಾಟ ತಂಡ ಅಕಾಡೆಮಿ ಕಾರ್ಯದರ್ಶಿ ಕೋಡಿ ಚಂದ್ರಶೇಖರ್‌ರವ್ರ ನೇತೃತ್ವಲಿ ಪಾಲ್ಗೊಂಡ್ ಲಾಯಕ್ಕಾದ ಪ್ರದರ್ಶನ ನೀಡ್‌ತ್.ಅಂದ್‌ಮಧ್ಯಾನ ಮ್ಯೇಲೆ ೩ ಗಂಟೆಗೆ ಸರಿಯಾಗಿ ಮಂಗಳೂರ್ ಪುರಭವನಂದ ಮಂಗಳ ಕ್ರೀಡಾಂಗಣ ಮುಟ್ಟನಡ್ದ್ ಬ್ಯಾರೆ ಬ್ಯಾರೆ ಕಲಾ ತಂಡಗಳ ಬಾರೀ ಮೆರವಣಿಗೆಲಿ ಗೌಡ ಸಾಂಸ್ಕೃತಿ ಅಕಾಡೆಮಿಯ ವತಿಂದ ಗಾಳಿಬೀಡ್‌ನ ಬೆಳಕಾಟ ತಂಡದ ಮುಂದಾಲತ್ವನ ಕೋಳಿ ಮುಡಿಯನ ಅನಂತಕುಮಾರ್ ವಹಿಸಿದ್ರೋ. ಕರಕರನ ಉತ್ತಯ್ಯ. ಕರಕರನ ಮೋಹನ, ಕೊಂಬಾರನ ಕಾವೇರಪ್ಪ, ಕೊಂಬಾರನ ಗಣಪತಿ, ಯಾಲದಾಳ್ ಧನಂಜಯ ಯಾಲದಾಳ್ ಕುಂಞಪ್ಪ, ಯಾಲದಾಳ್ ದಿನೇಶ್ ಕುಮಾರ್, ಬೇಕನ ರಾಮಪ್ಪ, ಕುಟ್ಟಮಣಿಯನ ಮಧು, ಹೊಸೋಕ್ಲು ಕುಶಾಲಪ್ಪ, ಕಡಂಬಳ ಮೋಹನ್ ಕುಮಾರ್ ಮುಂತಾದವ್ ಭಾಗವಹಿಸಿದ್ರೊ.

ತುಂತಜೆ ಗಣೇಶ್

************************************

# ಮಡಿಕೇರಿಯಲ್ಲಿ ಕೊಡಗು ಸಂಗಾತಿಯ ಮುಖಾ-ಮುಖಿ ಕಾರ್ಯಕ್ರಮ : ಏನು? ಹೇಗೆ?

ಕೊಡಗು ಸಂಗಾತಿ ಪತ್ರಿಕೆ ಎಂದೊಡನೆ ಜನಾಂಗದ ಓದುಗರಿಗೆ ಆಗುವ ಆನಂದ, ಬೇಸರ, ಕೋಪ ಸರ್ವೆ ಸಾಮಾನ್ಯ. ಒಂದು ಪತ್ರಿಕೆ ಎಂದೊಡನೆ ಬಾಳೆಹಣ್ಣು ಸುಲಿದು ತಿಂದ ಹಾಗೆ ಅಲ್ಲ ಎಂದು ಹೆಚ್ಚಿನ ಓದುಗರಿಗೆ ತಿಳಿದಿರಲಿಕ್ಕಿಲ್ಲ. ಇದರ ಏರಿಳಿತಗಳು, ಕಷ್ಟನಷ್ಟಗಳು ಅದರ ಅರಿವು ಸಂಪಾದಕ ಮತ್ತು ವ್ಯವಸ್ಥಾಪಕರಿಗೆ ಮಾತ್ರ ಗೊತ್ತು. ಬಹಳ ಕಾಲದಿಂದ ಈ ರೀತಿಯ ಏರಿಳಿತಗಳಿಗೆ, ಕಷ್ಟನಷ್ಟಗಳಿಗೆ ಕಾರಣವೇನೆಂದು ಸಂಗಾತಿಗೆ ತಿಳಿಯಲು ಕಷ್ಟವೇನಾಗಿಲ್ಲ. ಬದಲಾಗಿ ಸಮಯದ ಕೊರತೆ ಒಂದೇ ಕಾರಣವೆಂದು ಕೊನೆಗೂ ತಿಳಿದಿದ್ದಾಯಿತು. ಇದನ್ನು ನೇರವಾಗಿ ಜನಾಂಗದವರಲ್ಲಿ ಹಂಚಿಕೊಳ್ಳಬೇಕೆಂದು ಬಹಳ ಕಾಲದಿಂದ ಹಾತೊರೆಯುತ್ತಿತ್ತು. ಆದರೆ ಅನಾನುಕೂಲತೆಯಿಂದ ನೆನೆಸಿದಂತೆ ನಡೆಯಲಾಗಲಿಲ್ಲ. ಕೊನೆಗೂ ದಿನಾಂಕ 26-12-1999ನೇ ದಿನವನ್ನು ಗೊತ್ತು ಮಾಡಿ ಮುಖಾ-ಮುಖಿ ಕಾರ್ಯಕ್ರಮವನ್ನು ನಿಗದಿಪಡಿಸಲಾಯಿತು.

ಈ ಕಾರ್ಯಕ್ರಮದಲ್ಲಿ ಪತ್ರಿಕೆಯ ಪರವಾಗಿ ಸಂಪಾದಕಿ ಪಟ್ಟಡ ಶೀಲಾಮಣಿಯವರು, ಗೌರವ ಸಂಪಾದಕ ಪಟ್ಟಡ ಪ್ರಭಾಕರ್‌ರವರು, ತಡಿಯಪ್ಪನ ಕುಮಾರ್ ಜಯನವರು ಹಾಗೂ ಕಾವೇರಿ ನಾಡು ಸಂಸ್ಥಾಪಕ ಅಮ್ಮಾಜೀರ ಪೊನ್ನಪ್ಪನವರು ವೇದಿಕೆಯಲ್ಲಿ ಆಸೀನರಾಗಿದ್ದರು. ಪ್ರಾರ್ಥನೆಯನ್ನು ಕಲ್ಲುಮುಟ್ಲು ಶಾಂತಿ ಚೆಟ್ಟಿಯಪ್ಪ ಮಾಡಿದರು. ನಂತರ ತಡಿಯಪ್ಪನ ಕುಮಾರ್ ಜಯನವರಿಂದ ಪತ್ರಿಕೆಯ ಪರವಾಗಿ ಸಮಾಜ, ಸಂಘಸಂಸ್ಥೆಗಳ ಅಧ್ಯಕ್ಷರುಗಳಿಗೂ ಹಾಗೂ ಕಾರ್ಯಕಾರಿ ಮಂಡಳಿಯವರಿಗೂ, ಬರಹಗಾರರಿಗೂ, ಚಂದಾದಾರರಿಗೂ, ಪತ್ರಿಕಾ ಓದುಗರೆಲ್ಲರಿಗೂ ಸ್ವಾಗತವನ್ನು ಕೋರಿದರು. ಜನಾಂಗದ ಪರವಾಗಿ ಸಭೆಗೆ ಬೆಂಗಳೂರಿನಿಂದ ಹಿರಿಯ ಮುತ್ಸದ್ದಿ ಸಾಹಿತಿ ಪ್ರೊ. ಪೂಜಾರಿ ಮೊಣ್ಣಪ್ಪನವರು ಆಗಮಿಸಿದ್ದರು. ಮಡಿಕೇರಿ ಗೌಡ ಸಮಾಜದ ಉಪಾಧ್ಯಕ್ಷರು ಹಾಗೂ ಕುಶಾಲನಗರ ಗೌಡ ಸಮಾಜದ ಅಧ್ಯಕ್ಷರೂ ಆದ ಕೋರನ ಪೂಣಚ್ಚನವರು, ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷರು, ರಾಜಕೀಯ ಧುರೀಣರೂ ಆದ ಕುಯ್ಯಮುಡಿ ಪೂರ್ಣಯ್ಯನವರು, ಕೊಡಗು ಗೌಡ ವಿದ್ಯಾ ಸಂಘದ ಉಪಾಧ್ಯಕ್ಷ ಪಂಜಿಪಳ್ಳ ವೆಂಕಪ್ಪನವರು, ಕೊಡಗು ಗೌಡ ವಿದ್ಯಾಸಂಘದ ಗೌರವ ಕಾರ್ಯದರ್ಶಿಗಳು, ರಾಜಕೀಯ ಧುರೀಣರು ಆದ ಕೋಳುಮುಡಿಯನ ಅನಂತ್‌ಕುಮಾರ್‌ರವರೂ, ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ ಅಧ್ಯಕ್ಷರೂ, ಯುವ ನೇತಾರರೂ ಆದ ತುಂತಜೆ ಗಣೇಶ್‌ರವರು, ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಕಾರ್ಯದರ್ಶಿ ಯುವ ನೇತಾರ, ಉತ್ಸಾಹಿ ತರುಣ ಕೋಡಿ ಚಂದ್ರಶೇಖರ್‌ರವರು, ಕೊಡಗು ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷರಾದ ಚೀಯಂಡಿ ರಾಧ ಯಾದವ್‌ರವರು, ಅಲ್ಲದೆ ಕೊಡಗು ಗೌಡ ಮಹಿಳಾ ಒಕ್ಕೂಟದ ಕಾರ್ಯದರ್ಶಿ ಕೂಡಕಂಡಿ ಕಾವೇರಮ್ಮನವರು ಹಾಜರಿದ್ದವರಲ್ಲಿ ಪ್ರಮುಖರು. ಇವರ ಜೊತೆಯಲ್ಲಿಯೇ ಜನಾಂಗದ ಅಭಿಮಾನಿಗಳೂ, ಹಿತಚಿಂತಕರೂ, ಪತ್ರಿಕೆಯ ಓದುಗರೂ, ಹಾಗೂ ಹಲವಾರು ಸಂಘಸಂಸ್ಥೆಗಳ ಪದಾಧಿಕಾರಿಗಳು ಹಾಜರಿದ್ದರು.

ಅಂದಿನ ಕಾರ್ಯಕ್ರಮವನ್ನು ಸಾಹಿತಿಗಳು, ಉಪನ್ಯಾಸಕರು ಆದ ಬಾರಿಯಂಡ ಜೋಯಪ್ಪನವರು ಹಾಗೂ ಉತ್ಸಾಹಿ ತರುಣ, ಕೊಡಗು ಗೌಡ ಸಾಂಸ್ಕೃತಿಕ ಅಕಾಡಮಿಯ ಮಾಜಿ ಉಪಾಧ್ಯಕ್ಷರೂ, ಅಪ್ಪಯ್ಯ ಗೌಡ ಸಂಸ್ಮರಣಾ ಸಮಿತಿಯ ಪ್ರಧಾನ ಸಂಚಾಲಕರೂ ಆದ ಗುಡ್ಡೆಮನೆ ರಮೇಶ್‌ರವರು ಕಾರ್ಯಕ್ರಮ ಸಂಯೋಜಿತರಾಗಿಯೂ, ನಿರೂಪಕರಾಗಿಯೂ ಆಗಮಿಸಿದ್ದರು.

ಮುಖಾ-ಮುಖಿ ಕಾರ್ಯಕ್ರಮಕ್ಕೆ ಪ್ರೊ. ಪೂಜಾರಿ ಮೊಣ್ಣಪ್ಪನವರು ಚಾಲನೆ ನೀಡಿದರು.

**ಪ್ರಶ್ನೆಗಳು :**

1) ಕೊಡಗು ಸಂಗಾತಿಯ ಸ್ಥಾಪನೆಯ ಹಿಂದೆ ಮತ್ತು ನಂತರ ಜನಾಂಗದ ಬಗ್ಗೆ ತಮಗಿದ್ದ ಕಾಳಜಿಯೇನು?
2. ಜನಾಂಗಕ್ಕೆ ಪತ್ರಿಕೆಯ ಅಗತ್ಯ ಹೇಗೆ?
3. ಪತ್ರಿಕೆಯ ಉಳಿವು ಹಾಗೂ ಅಭಿವೃದ್ಧಿ ಹೇಗೆ?
4. ಪತ್ರಿಕೆಯ ಗುಣಮಟ್ಟ ಹೇಗಿರಬೇಕು?
5. ಪತ್ರಿಕೆಯ ಚಿಹ್ನೆ ಬಗ್ಗೆ ಹಾಗೂ ಹತ್ತಾರು ಪ್ರಶ್ನೆಗಳನ್ನು ಕೇಳಲಾಯಿತು.

ಈ ಪ್ರಶ್ನೆಗಳಿಗೆ ಸೇರಿಕೊಂಡಂತೆ ಉತ್ತರವನ್ನು ಸಲಹೆಯ ಮೂಲಕ ವ್ಯಕ್ತ ಪಡಿಸಲಾಯಿತು.

**ಸಲಹೆ ಹಾಗೂ ಅಭಿಪ್ರಾಯ :**

1). **ಕೋರನ ಪೂಣಚ್ಚನವರಿಂದ :** ನಮ್ಮ ಸಮಾಜದ ಹಾಗೂ ಸಂಘ ಸಂಸ್ಥೆಗಳ ಕಾರ್ಯ ವೈಖರಿ ಅಲ್ಲದೆ ಅಭಿವೃದ್ಧಿಯತ್ತ ಚಿಂತಿಸಲೂ ಅಲ್ಲದೆ ಆಗು-ಹೋಗುಗಳನ್ನು ಪ್ರತಿ ಕುಟುಂಬಗಳಿಗೆ ಸೂಕ್ತ ಮಾಹಿತಿ ಕಲ್ಪಿಸಿ ಕೊಡುವಲ್ಲಿ ಪತ್ರಿಕೆಯ ಕಾರ್ಯ ಮಹತ್ವದಾಗಿದೆ. ಆದುದರಿಂದ ಪತ್ರಿಕೆಯ ಅಗತ್ಯ ಜನಾಂಗಕ್ಕೆ ಇದೆ ಎಂದು ಅಭಿಪ್ರಾಯಪಟ್ಟರು.

2) **ಕೋಳು ಮುಡಿಯನ ಅನಂತಕುಮಾರ್ :** ನಮ್ಮ ಸಂಸ್ಕೃತಿ, ಸಂಪ್ರದಾಯ, ಭಾಷೆ ಆಚಾರ, ವಿಚಾರ, ನಡೆ, ನುಡಿಯನ್ನು ಉಳಿಸಿ ಪೋಷಿಸುವುದಕ್ಕೆ ಪತ್ರಿಕೆ ಅಗತ್ಯವೆಂದು ಅಭಿಪ್ರಾಯ ಪಟ್ಟರು.

3) **ಬಾರಿಯಂಡ ಜೋಯಪ್ಪ :** ಪತ್ರಿಕೆಯನ್ನು ಪ್ರತಿಯೊಬ್ಬರೂ ತಪ್ಪದೇ ಕೊಂಡು ಓದಬೇಕು. ಪತ್ರಿಕೆಗೆ ದಿನಕ್ಕೆ 30 ಪೈಸೆಯಂತೆ ಖರ್ಚಾಗಬಹುದು. ಇದು ನಾವು ಮಾಡುವ ಇತರ ಖರ್ಚುಗಳಿಗೆ ಹೋಲಿಸಿದರೆ ಏನು ಅಲ್ಲವೆಂದರಲ್ಲದೆ. ಸಂಪಾದಕ ಮಂಡಳಿಯನ್ನು ರಚಿಸುವಂತೆ ಸಂಪಾದಕಿಯವರಿಗೆ ಸಲಹೆಯಿತ್ತರು.

✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻

4) **ಗುಡ್ಡೆಮನೆ ರಮೇಶ್ :** ಪತ್ರಿಕೆಯು ಸಮಗ್ರವಾಗಿ ಪ್ರಚಾರವಾಗಬೇಕು, ಏಜೆಂಟರನ್ನು ನೇಮಿಸಬೇಕು; ಕನಿಷ್ಟ 5000 ಪತ್ರಿಕೆಗಳು ಪ್ರಕಟಿಸುವಂತಾಗಬೇಕು. ಅದಕ್ಕೆ ಜನಾಂಗದವರ ಸಹಕಾರ ಅಗತ್ಯವೆಂದು ಸಲಹೆ ನೀಡಿದರು.

5) **ಗಂಗಾಧರ ಗೌಡ :** ದಕ್ಷಿಣ ಕನ್ನಡ ಕೊಡಗು ಗೌಡ ಒಂದೇ ಆದ್ದರಿಂದ ಸುಳ್ಯಕ್ಕೆ ಹೆಚ್ಚಿನ ಆದ್ಯತೆ ನೀಡಿ, ವರದಿಗಾರರನ್ನು ನೇಮಿಸಿ, ಹಾಗಾದಲ್ಲಿ ಹೆಚ್ಚಿನ ಓದುಗರು ದೊರೆತು ಪತ್ರಿಕೆಯ ಅಭಿವೃದ್ಧಿಗೆ ಸಹಕಾರಿಯಾಗಲಿದೆ ಎಂದು ಸಲಹೆಯಿತ್ತರು.

6) **ಕುಯ್ಯಮುಡಿ ಪೂರ್ಣಯ್ಯ :** ಪತ್ರಿಕೆ ಸ್ಥಾಪನೆಯಾದಾಗ ಸರಿಯಾದ ಯೋಜನೆ ಕೈಗೊಳ್ಳಲಿಲ್ಲ. ಇದರಲ್ಲಿ ಪ್ರಭುದ್ದತೆಯಿಲ್ಲ, ಮುಂದೆ ಒಳ್ಳೆ ಒಳ್ಳೆ ಲೇಖನಗಳನ್ನು ಪ್ರಕಟಿಸಿ ಯುವ ಜನಾಂಗಕ್ಕೆ ಮಾರ್ಗದರ್ಶನ ಮಾಡಿ, ಲೇಖಕರ ಬಳಗ ರಚಿಸಿ ಅದರ ಮೂಲಕ ಅಭಿವೃದ್ಧಿ ಪಡಿಸಿ, ಜಿಲ್ಲೆ, ತಾಲ್ಲೂಕು, ಗ್ರಾಮ ಮಟ್ಟದಲ್ಲಿ ವರದಿಗಾರರ ನೇಮಕ ಮಾಡಿ ಪತ್ರಿಕೆಯ ಅಭಿವೃದ್ಧಿಗೆ ಶ್ರಮಿಸಿ. ನಿಮ್ಮ ಪತ್ರಿಕೆಗೆ ನನ್ನ ವೈಯಕ್ತಿಕ ಸಹಕಾರವಿದೆ ಎಂದು ಹೇಳಿದರು.

7) **ಕೋರನ ಪೂಣಚ್ಚ :** ಪತ್ರಿಕೆಯನ್ನು ಪ್ರಚಾರ ಮಾಡಬೇಕು. ಅದಕ್ಕೆ ಜನಾಂಗ ಏನು ಮಾಡಬೇಕೆಂದು ಪ್ರಶ್ನೆ ಹಾಕಿ ಅವರಿಂದಲೇ ಕೆಲವು ಸಲಹೆಗಳು.

8) **ಪಂಜಿಪಳ್ಳ ವೆಂಕಪ್ಪ :** ಪ್ರತಿ ಮನೆಯಲ್ಲಿ ಚಂದಾದಾರರಾಗಲು ನಾವು ಪ್ರೇರೇಪಿಸಬೇಕು, ಜನಾಂಗದ, ಸಂಘ ಸಂಸ್ಥೆಗಳ ಅಧ್ಯಕ್ಷರು ಹಾಗೂ ಕಾರ್ಯಕಾರಿ ಮಂಡಳಿಯವರಿಂದ ಸೂಕ್ತ ಸಲಹೆ ಸೂಚನೆಯನ್ನು ಪಡೆಯುವುದು ಒಳಿತೆಂದು ಸೂಚಿಸಿದರು.

9) **ತುಂತಜಿ ಗಣೇಶ್ :** ಕತ್ತಿ ಕೋವಿ, ಕುಲದೇವರನ್ನೊಳಗೊಂಡ ಸಂಗಾತಿಯ ಚಿಹ್ನೆ ಜನಾಂಗಕ್ಕೆ ಸೂಕ್ತವಾದುದು. ಅದು ಕೇವಲ ಕೊಡಗು ಸಂಗಾತಿಯ ಚಿಹ್ನೆಯಾಗಿರದೆ ಜನಾಂಗದ ಚಿಹ್ನೆಯಾಗಬೇಂದು ಸಲಹಯಿತ್ತರಲ್ಲದೆ ಪತ್ರಿಕೆಯ ಬೆಳವಣಿಗೆಗೆ ಸರಿಯಾದ ಮಾರ್ಗ ಸೂಚಿ ಅಗತ್ಯವೆಂದರು. ಉದಾಹರಣೆಯೊಂದಿಗೆ.

10) **ಕೋಡಿ ಚಂದ್ರಶೇಖರ್ :** ಲೇಖನಗಳನ್ನು ಪ್ರಕಟಿಸುವಾಗ ಪಕ್ಷಪಾತ ಮಾಡಬಾರದು, ಅರೆಭಾಷೆಯಲ್ಲೇ ಹೆಚ್ಚು ಪ್ರಕಟಿಸಬೇಕು. ಪತ್ರಿಕೆಯಿಂದಲೇ ನಾನು ಅರೆಭಾಷೆಕಲಿತದ್ದು ಎಂದು ಹೆಮ್ಮೆಯಿಂದ ಹೇಳಿಕೊಂಡರು.

11) **ಪ್ರೊ. ಪೂಜಾರಿ ಮೊಣ್ಣಪ್ಪ :** ಕೊಡಗು ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಜಂಟಿ ಸಂಪಾದಕ ಮಂಡಳಿಯ ಕೊಡಗು ಸಂಗಾತಿ ಅಭಿವೃದ್ಧಿ ಮಂಡಳಿ ರಚಿಸುವಂತೆ ಸಲಹೆ ನೀಡಿದರು.

12) **ಬಾರಿಕೆ ಲಿಂಗರಾಜು :** ಪತ್ರಿಕೆಯನ್ನು ತಿಂಗಳಿಗೊಮ್ಮೆ ತರಲು ಸೂಚನೆಯಿತ್ತರು.

13) **ಆಜಡ್ಕ ರಾಣಿ ಬಾಲಕೃಷ್ಣ :** ಪತ್ರಿಕೆಯು15 ದಿನಕ್ಕೊಂದರಂತೆ ಈಗಿನಂತೆ ಇದ್ದರೆ ಒಳ್ಳೆಯದೆಂದರು.

14) **ಸಬ್ಬಂಡ್ರ ಜಗದೀಶ್ :** ಪರಿಚಯ ಲೇಖನವನ್ನು ಪ್ರಕಟಿಸುವಾಗ ಆಧಾರವನ್ನು ಪರಾಮರ್ಥಿಸಿ ಪ್ರಕಟಿಸಬೇಕೆಂದು ಸಲಹೆಯಿತ್ತರು.

ಅಂತಿಮವಾಗಿ ಸಭೆಯಲ್ಲಿ ಒಕ್ಕೊರಳಿನಿಂದ ಈ ಕೆಳಗಿನ ಸಲಹೆಯನ್ನು ಜಾರಿಗೆ ತರುವಂತೆ ತೀರ್ಮಾನಿಸಲಾಯಿತು.

1. ಕೊಡಗು ಸಂಗಾತಿ ಅಭಿವೃದ್ಧಿ ಸಮಿತಿ ರಚನೆ.
2. ಸಂಪಾದಕ ಮಂಡಳಿ ರಚನೆ
3. ಕೊಡಗು ಸಂಗಾತಿಯ ಚಿಹ್ನೆಯ ಬಗ್ಗೆ ,ಅಲ್ಲದೆ ಇತರ ಕೆಲವು ಸೂಕ್ಷ್ಮ ಸಲಹೆಗಳನ್ನು ಮುಂದೆ ವೇದಿಕೆಯಲ್ಲಿ ಚರ್ಚಿಸಿ ತೀರ್ಮಾನ ಕೈಗೊಳ್ಳುವುದಾಗಿ ಸಭೆ ತೀರ್ಮಾನಿಸಿತು.

ಅಂದಿನ ಕಾರ್ಯಕ್ರಮಕ್ಕೆ ಅಗತ್ಯವಾಗಿದ್ದ ಧ್ವನಿ ವರ್ಧಕವನ್ನು ಪಳ್ಳಿಪುರ ಭರತ್ ಒದಗಿಸಿದ್ದರಲ್ಲದೆ, ಉಪಹಾರದ ವ್ಯವಸ್ಥೆಯನ್ನು ಕೊಡಗು ಗೌಡ ಮಹಿಳಾ ಒಕ್ಕೂಟ ಏರ್ಪಡಿಸಿತ್ತು. ಈ ಕಾರ್ಯಕ್ರಮಕ್ಕೆ ಸ್ಥಳಾವಕಾಶವನ್ನು ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷರೂ ಹಾಗೂ ಕಾರ್ಯಕಾರಿ ಮಂಡಳಿಯವರು ಉದಾರವಾಗಿ ನೀಡಿ ಸಹಕರಿಸಿದ್ದರು.

ಕಾರ್ಯಕ್ರಮದ ಕೊನೆಯಲ್ಲಿ ಬೈತಡ್ಕ ಬೆಳ್ಳಪ್ಪನವರು ವಂದನಾರ್ಪಣೆ ಅರ್ಪಿಸಿದರು.

**ವರದಿ : ಬೈನೆರವನ ಇಂದ್ರಕುಮಾರ್, ಮೈಸೂರು**
**ಕುಂಬುಗೌಡನ ರಂಜೀತ್, ಮಕ್ಕಂದೂರು**

---

## ಅರೆಭಾಷಿಕರ ವರ್ಷದ 12 ತಿಂಗಳು

ಪಗ್ಗು
ಬೇಸಿಗೆ
ಕಾರ್ತಿಂಗ
ಆಟಿ
ನಿರ್ನಾಲ್
ಬೆಣ್ಣ್ಂಗ
ಜಾರ್ದೆ
ಪೆರಾರ್ದೆ
ಪೊನ್ನಿ
ಮಾಯಿ
ಸುಗ್ಗಿ

**ಕೋಳು ಮುಡಿಯನ ಪಾರ್ವತಿ, ಗಾಳಿಬೀಡು.**

---

## ಒಗಟು

1. ಒಂಟಿಕಾಲಿನ ಕೊಕ್ಕರೆ ಬಗ್ಗಿ ಬಗ್ಗಿ ನೀರ್.ಕುಡ್ಡದೆ ಇದ್ ಎಂತ
2. ಕೆರೆ ತುಂಬಾ ಕುರಿ ಮೆಟ್ಟ್ ಇದ್ ಎಂತ
3. ಸತ್ತವನೇ ತಾತ್ ಸಾವಿನ ಸುದ್ದಿ ಇದ್ ಎಂತ

**ಉತ್ತರ : 1. ಏತ 2. ನಕ್ಷತ್ರ 3. ಹಲಸಿನ ಹಣ್ಣ್**

ಪೊನ್ನೆಟಿ ಜಯಂತಿ ಪೂವಯ್ಯ, ಟೀನರಸಿಪುರ.

✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻

# ಅರೆಭಾಷಿಕ ಗೌಡ ಜನಾಂಗದ ಮೂರು ಕಣ್ಣುಗಳು :

## ಕೊಡಗು ಸಂಗಾತಿ; ಕಾವೇರಿ ನಾಡು; ಹಾಗೂ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ

ದೇವರು ಪ್ರಕೃತಿಯನ್ನು ಸೃಷ್ಟಿಸಿದರೆ ಸಾಲದು. ಅದರ ಸವಿಯನ್ನು ಸವಿದು ಅನುಭವಿಸಲು ನಮಗೆ ಮುಖ್ಯವಾದುದು ಕಣ್ಣುಗಳು, ಕಣ್ಣುಗಳ ಪಾತ್ರ ಜಗತ್ತಿನಲ್ಲಿ ಎಷ್ಟಿದೆಯೆಂದರೆ ಯಾರು ಇದಕ್ಕೆ ಬೆಲೆಯನ್ನು ಕಟ್ಟಲಾರರು. ಒಂದು ಜೀವಿಯ ಕಣ್ಣು ಕುರುಡಾದರೆ ಇನ್ನೇನು ಸತ್ತ ಹಾಗೆ, ಅಲ್ಲದೆ ಪ್ರಕೃತಿಯಲ್ಲಿ ಯಾವ ಸ್ಥಾನಮಾನವಿಲ್ಲ. ಅದಕ್ಕೆ ಕೊನೆಯೇ ಸಾವು. ಬದುಕಿನಲ್ಲಿ ಏನಾದರೂ ಸಾಧಿಸಬೇಕಿದ್ದರೆ ಮೊದಲ ಆದ್ಯತೆ ಕಣ್ಣಿಗೆ. ಹೀಗೆ ಕಣ್ಣುಗಳ ಪ್ರಯೋಜನ ಹುಟ್ಟು ಸಾವುಗಳ ಮಧ್ಯ ಎಷ್ಟಿದೆಯೆಂದರೆ ನೀವೇ ಊಹಿಸಿ.

ಈ ರೀತಿಯಾಗಿ ಕಣ್ಣುಗಳನ್ನು ನಾವು ಒಂದೊಂದು ಸಾಧನೆಗಳಿಗೆ ಹೋಲಿಸುತ್ತಾ ಹೋಗುತ್ತೇವೆ. ಈ ಹೋಲಿಕೆಯಲ್ಲಿ ಈಗ ನನ್ನ ಕಣ್ಣಿಗೆ ಬಿದ್ದ ಸಾಧನೆಯ ಪಟ್ಟಿಯಲ್ಲಿ ಮೊದಲ ಸ್ಥಾನ ಕೊಡಗು ಸಂಗಾತಿ ಸಂಸ್ಥೆ, ಕಾವೇರಿ ನಾಡು ಸಂಸ್ಥೆ ಮತ್ತು ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ, ಮಡಿಕೇರಿ ಇವರುಗಳಿಗೆ ಸಲ್ಲಬೇಕು ಎಂದ ಮಾತ್ರಕ್ಕೆ ಬೇರೆಯಾರ ಸಾಧನೆಯನ್ನು ಕೆಳ ಮಟ್ಟಕ್ಕೆ ತಳ್ಳುವಂತಿಲ್ಲ. ಗೌಡ ಸಮಾಜಗಳು, ವಿದ್ಯಾ ಸಂಘ ಹಾಗೂ ಸಣ್ಣಪುಟ್ಟ ಸಂಘ ಸಂಸ್ಥೆಗಳು ಬೇಕಾದ ಸಾಧನೆ ಮಾಡಿದ್ದಾರೆ. ಆದರೆ ಇಂದು ಜನಾಂಗಕ್ಕೆ ಬೇಕಾದ ನಿಜವಾದ ಸಾಧನೆಯೇನು? ಸಂಘಟನೆ ಮತ್ತು ಐಕ್ಯತೆಗೆ ಮೊದಲಿಗೆ ನಾಂದಿ ಹಾಡಿ ಉದಯಿಸಿದ ಕೊಡಗು ಸಂಗಾತಿ ಜನಾಂಗದ ಬಳಿಗೆ ತೆರಳಿ ಜನಾಂಗದ ಸಂಘಟನೆಯ ಅಗತ್ಯವನ್ನು ಎತ್ತಿ ಸಾರಿತು. ಇದಕ್ಕೆ ಪೂರಕವಾಗಿ ಬೆಂಗಳೂರಿನಲ್ಲಿ ಅಮ್ಮಾಜೀರ ಪೊನ್ನಪ್ಪನವರ ಕಾವೇರಿ ನಾಡು ಸಂಸ್ಥೆ ಹುಟ್ಟಿ ಅಲ್ಲಿಯ ಗೌಡ ಜನಾಂಗದವರನ್ನು ಒಂದೆಡೆ ಕಲೆ ಹಾಕಿ ಸುದ್ದಿ ಮಾಡಿತು. ಇದೆರಡಕ್ಕೂ ಪೂರಕವಾಗಿ ಕೊಡಗು ಗೌಡ ಸಾಂಸ್ಕೃತಿಕ ಅಕಾಡಮಿಯ ಉದಯ. ಅಕಾಡಮಿಯ ಕೆಲಸವೂ ಇದೇ ಆಗಿದ್ದು ಈಗ್ಗೆ ಈ 3ವರ್ಷಗಳಿಂದ ಜನ ಸಂಘಟನೆಯಲ್ಲಿ ತೊಡಗಿಸಿ ಜನರ ಮನ ಗೆಲ್ಲುವಲ್ಲಿ ಸಫಲವಾಗಿದೆ. ಇಂದಿನವರೆಗೆ ಒಂದು ಸಂಘಟನೆ ಬೆಳೆಯ ಬೇಕಾದರೆ ಅದಕ್ಕೆ ರಾಜಕೀಯ ಹಿನ್ನಲೆ ಬೇಕಿತ್ತು. ರಾಜಕೀಯ ಹಿನ್ನಲೆಯಿಲ್ಲದೆ ಸಂಘಟನೆಯಾದ ಜನಾಂಗ ಎಲ್ಲಿಯೂ ಕಾಣುತ್ತಿಲ್ಲ. ಆದರೆ ಇಂದು ಕೊಡಗು ಹಾಗೂ ಇತರ ಕಡೆ ನಮ್ಮ ಜನರ ಸಂಘಟನೆಯಾಗಿದೆ. ಒಂದು ಜನಾಂಗ ಸಂಘಟನೆಯಾಗ ಬೇಕಾದರೆ ಸಂಘಟಕರಿಗೆ ಪರ-ವಿರೋಧಗಳಿರುವುದು ಸರ್ವೆ ಸಾಮಾನ್ಯ. ಅದಕ್ಕೆಲ್ಲ ಸೊಪ್ಪು ಹಾಕದೆ ಮುನ್ನುಗ್ಗುವುದೇ ಸಂಘಟಕರ ಧ್ಯೇಯವಾಗಿರಬೇಕು. ಯುವಕರ ಪಾತ್ರ ಇಂತಹ ಸಂಘಟನೆಯಲ್ಲಿ ಮಹತ್ತರದಾಗಿ ಸಂಘಟನೆಯ ಮುಂಚೂಣಿಯಲ್ಲಿದ್ದರೆ ಖಂಡಿತ ಫಲ ಸಿಗುತ್ತದೆ ಎಂಬುದಕ್ಕೆ ಕೊಡಗು ಸಂಗಾತಿ, ಕೊಡಗು ಗೌಡ ಸಾಂಸ್ಕೃತಿಕ ಅಕಾಡಮಿ ಹಾಗೂ ಅಮ್ಮಾಜೀರ ಪೊನ್ನಪ್ಪನವರ ಕಾವೇರಿನಾಡಿನ ಸಂಘಟನಾ ಶಕ್ತಿಯನ್ನು ಮೆಚ್ಚತಕ್ಕದ್ದು. ಇದು ಜನಾಂಗಕ್ಕೆ ದೊರೆತ ಕಳೆದ ಶತಮಾನದ ಅತ್ಯಂತ ಅಮೂಲ್ಯ ಕೊಡುಗೆಯೆಂದರೆ ಅತಿಶಯೋಕ್ತಿಯಾಗಲಾರದು.

### ಕೊಡಗು ಸಂಗಾತಿ

ಕೊಡಗು ಸಂಗಾತಿ ಪತ್ರಿಕೆಯ ಉದಯ ಜನಾಂಗಕ್ಕೆ ಜ್ಞಾನೋದಯವಾಗುತ್ತಿದ್ದಂತೆ ಹರಡಿ ಹಂಚಿ ಹೋಗಿದ್ದ ಜನರನ್ನು ಒಂದೆಡೆ ಕಲೆ ಹಾಕಲು, ಕಣ್ಣೆದುರು ಓಡಾಡಿದರೂ ಒಬ್ಬರಿಗೊಬ್ಬರ ಪರಿಚಯವಿಲ್ಲದೆ ಇದ್ದ ಜನರು ಭಾಷೆಯನ್ನು ಮರೆತು ಪಾಶ್ಚಿಮಾತ್ಯ ಭಾಷೆಗೆ ವಾಲುತ್ತಿದ್ದ ಸಂದಿಗ್ದ ಪರಿಸ್ಥಿತಿಯಲ್ಲಿ ನಮ್ಮ ಜನ ವಿಶ್ವದಲ್ಲಿ ಹರಡಿರುವುದರ ವಿವರ, ಸ್ಥಳಗಳು ಹಾಗೂ ಇವರೆಲ್ಲಾದರ ಪರಿಚಯ ನೇರವಾಗಿ ಜನಾಂಗಕ್ಕೆ ನೀಡಿದ್ದು ಈ ನಮ್ಮ ಕೊಡಗು ಸಂಗಾತಿ. ಇಂದಿನ ಈ ರೀತಿಯ ಸಂಘಟನೆಯ ಮೂಲ ಕಾರಣಕರ್ತ ಪತ್ರಿಕೆ ಎಂದರೆ ಖಂಡಿತ ತಪ್ಪಾಗಲಾರದು. ಇದು ಕಡುಸತ್ಯ. ಇದಲ್ಲದೆ ಓದುವ ಹವ್ಯಾಸ ನಮ್ಮ ಜನ ಬೆಳೆಸಿಕೊಂಡಿದ್ದು, ಪ್ರಭುದ್ದತೆಯಿಲ್ಲದಿದ್ದರು ಪತ್ರಿಕೆಗೆ ಬರೆಯಲು ಸಾಕಷ್ಟು ಲೇಖಕರನ್ನು ಹುಟ್ಟು ಹಾಕಿದ್ದು, ಸಾಹಿತಿಗಳನ್ನು, ಪ್ರತಿಭೆಗಳನ್ನು ಜನಾಂಗದ ಗಣ್ಯರನ್ನು ಜನಾಂಗಕ್ಕೆ ಪರಿಚಯಿಸಿದ್ದು, ಜನಾಂಗದ ಆಗು ಹೋಗುಗಳ ಪರಿಚಯ, ಭಾಷೆ, ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರ, ಕಂದಾಚಾರಗಳ ಬಗ್ಗೆ ಇತ್ಯಾದಿಯಾಗಿ ಹೇಳತೀರದಷ್ಟು ಕೊಡುಗೆಯನ್ನು ಈ ನಮ್ಮ ಕೊಡಗು ಸಂಗಾತಿ ಜನಾಂಗಕ್ಕೆ ಧಾರೆಯೆರೆದಿದೆಯೆಂದು ನಿಮಗನ್ನಿಸುವುದಿಲ್ಲವೆ?

### ಕಾವೇರಿ ನಾಡು

ಜನಾಂಗದ ಕೆಲವರಿಗೆ ಅಮ್ಮಾಜೀರ ಪೊನ್ನಪ್ಪನವರನ್ನು ನೇರವಾಗಿ ಗೊತ್ತಿಲ್ಲದಿದ್ದರೂ ಅವರ ಹೆಸರನ್ನು ಕೇಳದವರಿಲ್ಲ. ಮನೆ ಮಾತಾಗಿರುವ ಅಮ್ಮಾಜೀರ ಪೊನ್ನಪ್ಪನವರ ಸಾಧನೆಗಳೇನು ಎಂದು ಯಾರಿಗೂ ಗೊತ್ತಿಲ್ಲದಿಲ್ಲ. ಬೆಟ್ಟವನ್ನು ಕಡಿದು ನಾಡನ್ನಾಗಿರಿಸಿದ ಈ ಮನುಷ್ಯನನ್ನು ಹಿಂದೆ ಬೆಂಗಳೂರನ್ನು ಕಟ್ಟಿದ ಕೆಂಪೇಗೌಡರಿಗೆ ಹೋಲಿಸಬಹುದು. ಹೇಗೆ? ಕೆಂಪೇಗೌಡರು ಬೆಂಗಳೂರನ್ನು ನಿರ್ಮಿಸಿ ಶತಮಾನಗಳೇ ಕಳೆದಿದೆ. ಕಾವೇರಿ ನಾಡು ಶತಮಾನ ಕಳೆದರೆ ಬೆಂಗಳೂರಿನೊಡನೆ ವಿಲೀನವಾಗಿ ಬೆಳೆಯುವುದಿಲ್ಲವೇ?

ನಮ್ಮ ಸಂಸ್ಕೃತಿ, ಸಂಪ್ರದಾಯ ನೆಲ ಕಚ್ಚುವ ಸಮಯದಲ್ಲಿ ಸಂಸ್ಕೃತಿ ಸಂಪ್ರದಾಯವನ್ನು ಎತ್ತಿಹಿಡಿದು ಜನಾಂಗಕ್ಕೆ ಪರಿಚಯಿಸಿದ್ದಾರೆ. ನೂರಾರು ಮನೆತನದ ಹೆಸರಿನ ಹಾಡುಗಳೊಂದಿಗೆ ಟಿ.ವಿ. ಚಾನಲ್‌ಗಳಲ್ಲಿ ಕುಣಿದು, ಕುಪ್ಪಳಿಸಿ ವಿಜೃಂಭಿಸಿದ್ದಾರೆ. ಇದು ಒಂದು ದೊಡ್ಡ ಸಾಧನೆ. ಟಿ.ವಿ.ಯ ಮೂಲಕ ನಮ್ಮ ಜನಾಂಗದ ಸಂಸ್ಕೃತಿಯನ್ನು ಹೊರ ಜಗತ್ತಿಗೆ ಎತ್ತಿ ತೋರಿಸಿದ್ದಾರೆ. ಇದು ಇಂದಿನವರೆಗೆ ನಮ್ಮ ಜನಾಂಗದ ಘಟಾನುಘಟಿಗಳ ಕೈಯಲ್ಲಿ

✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻

ಆಗದೇ ಇರುವುದನ್ನು ಸಾಮಾನ್ಯ ಈ ಮನುಷ್ಯ ಮಾಡಿರುವುದು ಅಲ್ಲದೆ, ಅರೆಭಾಷೆ ಹಾಡು ಮಾಡಿದ್ದು ನಿಜವಾಗಲೂ ಜನಾಂಗದ ಯಾವನೇ ಒಬ್ಬ ಬೆರಳು ತೋರಿಸುವಂತಿಲ್ಲ. ಇದರ ಜೊತೆಯಲ್ಲಿ ನಿವೇಶನಗಳನ್ನು ಮಾಡಿ ಹಂಚಿರುವುದು ಸಹ ಸಾಧನೆಯೇ ಅಲ್ಲದೆ ಇದೆಲ್ಲಾ ಜನಾಂಗಕ್ಕೆ ಅವರ ಮಮತೆಯ ಕೊಡುಗೆಯಾಗಿದೆ.

**ಕೊಡಗು ಗೌಡ ಸಾಂಸ್ಕೃತಿಕ ಅಕಾಡಮಿ :**

ಈಗ್ಯೆ 3ವರ್ಷದ ಹಿಂದೆ ಅಕಾಡಮಿಯ ಉದ್ಭವ ಕೊಡಗಿನಲ್ಲಿ ಕಲೆ, ಸಂಸ್ಕೃತಿ, ಸಂಪ್ರದಾಯ, ಆಚಾರ - ವಿಚಾರ, ನಡೆ ನುಡಿ, ಹಾಗೂ ಭಾಷೆ ಇನ್ನೇನು ಅವಸಾನದ ಅಂಚಿನಲ್ಲಿದೆ ಎಂಬ ಸೂಕ್ತ ಸಮಯದಲ್ಲಿ ತಲೆಯೆತ್ತಿ, ಎದೆ ತಟ್ಟಿ ನಿಂತ ಸಂಸ್ಥೆಯೇ ಈ ಕೊಡಗು ಗೌಡ ಸಾಂಸ್ಕೃತಿಕ ಅಕಾಡಮಿ. ಅಂದು ಕೊಡಗಿನ ಅರೆಭಾಷಿಕರಿಗೆ ಅವಶ್ಯಕವಾಗಿದ್ದ ಈ ಸಂಸ್ಥೆಯನ್ನು ಯಾರು ಸಹ ಈ ಎತ್ತರಕ್ಕೆ ಬೆಳೆಯುತ್ತದೆ ಎಂದು ಅಂದು ಕೊಂಡಿರಲಿಲ್ಲ. ಜನಾಂಗದ ಈ ಭಾವನೆಯನ್ನು ತಲೆಕೆಳಗೆ ಮಾಡಿದ ಸಾಧನೆಯೇ ಈ ಅಕಾಡಮಿಯದು. ತರುಣರ ಒಂದು ಗುಂಪು ಸೇರಿ ಹುಟ್ಟು ಹಾಕಿ ಜನಾಂಗದ ವಿಶ್ವಾಸಕ್ಕೆ ಪಾತ್ರವಾಗಿದೆ. ನನಗೆ ಗೊತ್ತಿರುವಂತೆ ಇದರ ರೂವಾರಿಗಳೇ ಮೊದಲಿಗೆ ಪಟ್ಟಡ ಪ್ರಭಾಕರ ಮತ್ತು ಪಳ್ಳಿಪುರ ಭರತ್‌ನವರು ಜೊತೆಯಾಗಿ ಮಡಿಕೇರಿ ಟೌನ್ ಹಾಲ್‌ನಲ್ಲಿ ಕಾರ್ಯಕ್ರಮವನ್ನು ಆಯೋಜಿಸಲು ಆಲೋಚಿಸಲಾಗಿತ್ತು. ನಂತರ ವಿದ್ಯಾಸಂಘದ ಕಾರ್ಯದರ್ಶಿ ಕೋಳುಮುಡಿಯನ ಅನಂತ್‌ಕುಮಾರ್ ಮತ್ತು ಅಧ್ಯಕ್ಷರಾದ ಕುಯ್ಯಮುಡಿ ಪೂರ್ಣಯ್ಯನವರು ಮತ್ತು ನಿರ್ದೇಶಕರುಗಳ ಸಹಕಾರದ ವಿದ್ಯಾಸಂಘದ ಆಶ್ರಯದಲ್ಲಿ ಮುಂದೆ ಯುವ ನೇತಾರ ಕೋಡಿ ಚಂದ್ರಶೇಖರ್ ಮೂಲಕ ಒಗ್ಗೂಡಿ ದಿನಾಂಕ 7-11-1997ರಲ್ಲಿ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಉದಯವಾಗಿ, ಅಧ್ಯಕ್ಷರಾಗಿ ತುಂತಜೆ ಗಣೇಶ್‌ನವರ ನೇತೃತ್ವದ ತಂಡವನ್ನು ಆರಿಸಿತು.

ಉಪಾಧ್ಯಕ್ಷರಾಗಿ ಗುಡ್ಡೆಮನೆ ರಮೇಶ್, ಪ್ರಧಾನ ಕಾರ್ಯ ದರ್ಶಿಯಾಗಿ ಕೋಡಿ ಚಂಗ್ರಶೇಖರ್, ಖಜಾಂಚಿಯಾಗಿ ಪಳ್ಳಿಪುರ ಭರತ್, ನಿರ್ದೇಶಕರಾಗಿ ಕುದುಕುಳಿ ಭರತ್, ಮೊಟ್ಟನ ದೇವಯ್ಯ, ನಡುಬೆಟ್ಟು ಅನಂತ, ಕೊಂಪುಳಿರ ಗಣೇಶ್, ಹುದೇರಿ ನಾಗೇಶ್, ಗುಡ್ಡೆಮನೆ ನಾಣಯ್ಯ, ಕುದುಪಜೆ ಚಿಣಪ್ಪ, ಕೊಂಬನ ಗಣೇಶ್, ಅಂಚೆ ಸುಧಿ, ಜೈನೀರ ವೆಂಕಟೇಶ್, ಕುಟ್ಟನ ಮುತ್ತಪ್ಪ, ಕಾಳೇರಮ್ಮನ ದೇವಯ್ಯ, ಮುಕ್ಕಾಟಿ ಸತೀಶ್, ಕುಂಜಿಲನ ಸುರೇಶ್, ಕುಂಬುಗೌಡನ ಸುನೀಲ್, ಮುಂಜ್ಞಾಂಡ್ರ ರೇಖಾ ಉಲ್ಲಾಸ, ತೋಟಂಬೈಲು ಪ್ರೇಮಾ ಆನಂದ, ನೈಯಣೀರ ಹೇಮಲತಾ, ಮತ್ತು ಸಂಗಾತಿ ಬಳಗದ ಪಟ್ಟಡ ಪ್ರಭಾಕರ್, ಪಟ್ಟಡ ಶಿವಕುಮಾರ್ ಹಾಗೂ ಗೀತಾ ಮೊಂಟಡ್ಕ ಇವರುಗಳನ್ನು ಆರಿಸಲಾಯಿತು. ಈ ಯುವಕರ ತಂಡ ನಮ್ಮ ಸಂಸ್ಕೃತಿ ಸಂಪ್ರದಾಯವನ್ನು ಹಾಗೂ ಯುವ ಜನಾಂಗಕ್ಕೆ ಸ್ಫೂರ್ತಿಯಾಗಬಲ್ಲ ಯೋಜನೆಗಳನ್ನು ತನ್ನ ಮಡಿಲಿನಲ್ಲಿ ಇಟ್ಟು, ಕೊಡಗಿನಲ್ಲಿ ಗೌಡ ಜನಾಂಗ ಬೇರೆ ಯಾವುದೇ ಜನಾಂಗಕ್ಕಿಂತ ಕಮ್ಮಿ ಇಲ್ಲ, ಎಂದು ಈ ಮೂರು ವರ್ಷದಲ್ಲಿ ಆಚರಿಸಿದ ಕೈಲ್ ಮೂಹೂರ್ತ, ಮಡಿಕೇರಿಯಲ್ಲಿ ಹುತ್ತರಿ, ಭಾಗಮಂಡಲದಲ್ಲಿ ಗೌಡ ಸಮ್ಮೇಳನ, ತಲಕಾವೇರಿಯಲ್ಲಿ ನಡೆದ ನಿಯಮ ಭಾಹಿರವಾದ ಪದ್ಧತಿಯನ್ನು ನಿಯಮಾನುಸಾರವಾಗಿರಿಸಿದ್ದು ಅಲ್ಲದೆ ಸಹಸ್ರಮಾನದ ಕೊನೆಯ ದಿನ ಏರ್ಪಡಿಸಿದ ಆದರ್ಶ ದಂಪತಿಗಳು ಹಾಗೂ ಫ್ಯಾಶನ್ ಶೋ ಕಾರ್ಯಕ್ರಮ ಜನಾಂಗದವರಿಗೆಲ್ಲಾ ತಮ್ಮ ಮನಸ್ಸಿನಾಳದ ಹುಮ್ಮಸ್ಸು ಹೊರ ಹೊಮ್ಮುವಂತೆ ಮಾಡಿದೆ. ಇದರ ಜೊತೆಯಲ್ಲಿಯೇ ಅಲ್ಲಿ ಎದ್ದು ಕಾಣುತ್ತಿದ್ದ ಅಂಶವೇನೆಂದರೆ ಅಕಾಡೆಮಿ ನಮ್ಮ ಭಾಷೆ, ಸಂಸ್ಕೃತಿ, ಸಂಪ್ರದಾಯಕ್ಕೆ ಆದ್ಯತೆಕೊಟ್ಟಿದ್ದು. ಇದೇ ರೀತಿಯಲ್ಲಿ ಮುಂದೆಯೂ ಕೂಡ ಅಕಾಡೆಮಿ ದಿಟ್ಟ ಹೆಜ್ಜೆಗಳೊಂದಿಗೆ ಮುನ್ನುಗ್ಗಲಿ, ಜನಾಂಗ ಖಂಡಿತವಾಗಿಯೂ, ಈ ಯುವಕರ ಪ್ರಯತ್ನಕ್ಕೆ ಬೆಂಬಲ ಕೊಡುತ್ತದೆ ಎಂಬ ವಿಶ್ವಾಸವು ನನಗಿದೆ. ಈ ಸಾಧನೆಗೆ ಕಾರಣ ಕರ್ತರಾದ ಹುಮ್ಮಸ್ಸಿನ ಯುವ ನೇತಾರರಾಗಿರುವ ಅಧ್ಯಕ್ಷ ತುಂತಜೆ ಗಣೇಶ್‌ರನ್ನು ಹಾಗೂ ಇವರಿಗೆ ಬೆನ್ನೆಲುಬಾಗಿ ನಿಂತ ಕೋಡಿ ಚಂದ್ರಶೇಖರ್‌ರವರಿಗೂ, ಉಪಾಧ್ಯಕ್ಷರಾದ ಹುದೇರಿ ನಾಗೇಶ್ ಅಲ್ಲದೆ ಕಾರ್ಯಕಾರಿ ಮಂಡಳಿಯ ನಿರ್ದೇಶಕರಿಗೂ ಜನಾಂಗದ ಪರವಾಗಿ ನನ್ನ ಹೊಸ ಸಹಸ್ರಮಾನದ, ಹೊಸ ಶತಮಾನದ ಹಾಗೂ ಹೊಸ ವರ್ಷದ ಶುಭಾಶಯಗಳು. ಧನ್ಯವಾದಗಳು.

**ತಡಿಯಪ್ಪನ ಕುಮಾರ ಜಯ, ಮೈಸೂರು**

---

## ಸಣ್ಣವು - ದೊಡ್ಡವು

ಸಣ್ಣವಾಗಿರ್‌ಕನ...
ಅಮ್ಮ ಮಕ್ಕಳಿಗೆ ಹೇಳ್‌ತಿತ್
ಆಡೊಕು ಹೈದ ಗೂಡೆಗ ಒಟ್ಟ್ ಸೇರಿಕಂಡ್
ದೊಡ್ಡವಾಕನ..
ಆಡ್‌ರೆ ಅದೆನಾದೇಂತ ಅಮ್ಮನ ಕೇಳ್‌ತ್
ಗೂಡೆ ಪೂರಾ ಹಲ್ಲ್ ಬುಟ್ಟ್‌ಕಂಡ್

**ಚಿದಾನಂದ ಹಾಲೆ ಮಜಲು**

---

## ನಗೆ ಹನಿಗಳು

ಡಾ॥ ದವಾಖಾನೆಗೆ ಬಂದ ಕಾಯಿಲಸ್ತನನ್ನ ಡಾಕ್ಟರ್ "ಹ್ಯಾಗಿದ್ದೀರಿ ಇವತ್ತು?" ತ ಕೇಳ್ತ್
ಕಾಯಿಲಸ್ತ : ಹಂಗೆ ಒಳೊ ಡಾಕ್ಟರೆ, ಉಸಿರಾಟನೆ ಕಷ್ಟ ಆಗಿಟ್ಟು
ಡಾಕ್ಟರ್: ಗ್ಯಾನ ಮಾಡ್‌ಬ್ಯಾಡ, ಅದನ್ನು ನಿಲ್ಲಿಸೀಕೆ ಇಂದ್ ಎಂತಾದ್ ಕೊಟ್ಟನೆತ ಹೇಳ್

**ಉಪ್ಪುಂಡೀರ ಯತಿನ ಪುನೀತ್, ಟಿ. ನರಸೀಪುರ.**

**ಕೊಡಗು ಸಂಗಾತಿ, ಪಾಕ್ಷಿಕ ಅನ್ನು ಕೊಂಡು ಓದಿರಿ.**

✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻

# ಮಾತಿನ ಮಹತ್ವ

"ಮಾತು ಬೆಳ್ಳಿ, ಮೌನ ಬಂಗಾರ," ಮಾತು ನುಡಿದರೆ ಹೋಯ್ತು, ಮುತ್ತು ಒಡೆದರೆ ಹೋಯ್ತು", "ಮಾತೆ ಮುತ್ತು ಮಾತೆ ಮೃತ್ಯು", "ಮಾತು ಮನೆ ಕೆಡಿಸಿತು ತೂತು ಒಲೆ ಕೆಡಿಸಿತು", "ಮಾತು ನುಡಿದರೆ ಮುತ್ತಿನ ಹಾರದಂತಿರಬೇಕು", "ಮಾತೇ ಕೇಡಿನ ತಾಣ" ಹೀಗೆಲ್ಲಾ ಆಡಿದ ನಮ್ಮ ಪೂರ್ವಜರು ಈಗಿನಂತೆ ವಿದ್ಯಾವಂತರಲ್ಲದಿದ್ದರೂ ಬುದ್ಧಿವಂತರು ವಿಚಾರಪರರು ಎನ್ನುವುದರಲ್ಲಿ ಎರಡು ಮಾತಿಲ್ಲ.

ಮಾತು ಹಿತವಾದಷ್ಟು ಬದುಕು, ಬಾಳು, ಜೀವನ ಸಿಹಿಯಾದೀತು, ಯಾರೊಡನೆ ಎಷ್ಟು, ಹೇಗೆ ಮಾತಾಡಬೇಕೆಂಬ ಪ್ರಜ್ಞೆಯಿಂದ ಮಾತು ಹೊರಬರುವುದು ಉತ್ತಮ. ಏಕೆಂದರೆ ಪ್ರೀತಿ, ವಿಶ್ವಾಸ, ಹಗೆ, ದ್ವೇಷ ಇತ್ಯಾದಿ ಹುಟ್ಟುವುದು ನಾವು ಆಡುವ ಮಾತಿನಿಂದ. ಮಾತು ಬಲ್ಲವನಿಗೆ ಜಗಳವಿಲ್ಲ, ಊಟಬಲ್ಲವನಿಗೆ ರೋಗವಿಲ್ಲ ಎಂಬಂತೆ ಸಮಯೋಚಿತವಾಗಿ ಮಾತನಾಡುವುದನ್ನು ರೂಢಿಸಿಕೊಳ್ಳಬೇಕು.

ಪೂರ್ವಗ್ರಹ ಪೀಡಿತರಾಗಿ ಮಾತನಾಡುವುದು ದಾರಿಯಲ್ಲಿ ಹೋಗುವ ಮಾರಿಯನ್ನು ಮನೆಗೆ ತಂದಂತೆ. ತಾನೇ ಸರ್ವಜ್ಞ ಎಂಬಂತೆ ಮಾತನಾಡಲು ಹೋದರೆ ಅನಾಹುತವೇ ಹೆಚ್ಚು. ತಿಳುವಳಿಕೆಯಿಂದ ಮಾತನಾಡುವುದು ಮಾತುಗಾರಿಕೆಯ ಒಂದು ಘಟ್ಟ. ಕೊರೆತದಿಂದ ಸ್ನೇಹಕ್ಕೆ ಕೊರತೆ ಎಂಬಂತೆ ಒಂದೇ ಸಮನೆ ಮಾತನಾಡುತ್ತ ಸಾಗಿದರೆ ಸಭೆಯಲ್ಲಿದ್ದ ಜನರೆಲ್ಲ ಮಾಯವಾಗುವುದು. ಎದುರಿನ ವ್ಯಕ್ತಿ ಪಲಾಯನಮಾಡುವುದು. ಸಾಮಾನ್ಯ ಸಂಗತಿಯಾದ್ದರಿಂದ ಮಾತು ಹಿತಮಿತವಾಗಿರುವುದು ಜೀವನದಲ್ಲಿ ಅತಿ ಅಗತ್ಯವಾದ ಅಂಶ.

ಬಿದ್ದ ಪೆಟ್ಟಿಗಿಂತ ನಕ್ಕ ಪೆಟ್ಟು ಹೆಚ್ಚು ಎಂಬಂತೆ ತೊಂದರೆಯಲ್ಲಿರುವವರೆದುರು ಟೀಕಿಸದೆ ಸಾಂತ್ವನ ಹೇಳುವುದು ಮಾತು ಗಾರಿಕೆಯ ಇನ್ನೊಂದು ಮಜಲು. ಏಕೆಂದರೆ "ಚಾಟಿ ಏಟಿಗಿಂತ ಮಾತಿನ ಏಟು ಹೆಚ್ಚು". ಅತ್ಯಂತ ಮೃದುವಾದ ಹಾಗೂ, ಅತ್ಯಂತ ಗಡಸಾದ ಮಾತು ಮಾತುಗಾರಿಕೆಯಲ್ಲಿ ಪ್ರಭಾವ ಬೀರುತ್ತದೆ.

"ಹೇಳುವುದು ಪುರಾಣ, ತಿನ್ನುವುದು ಬದನೆ" ಎಂತಾದರೆ ಆತನ ಮಾತಿಗೆ ಬೆಲೆ ಸಿಗುವುದು ಅಸಾಧ್ಯ. ನುಡಿದಂತೆ ನಡೆಯುವುದು ಮಾತುಗಾರಿಕೆಗೆ ಪುಷ್ಠಿ ನೀಡುವ ಅಂಶದಲ್ಲೊಂದು. ಮಾತನಾಡುವಾಗ ಭಾವನೆ ಅವಶ್ಯಕವಾದರೂ, ಭಾವೋದ್ವೇಗದ ಮಾತು ಅವಾಂತರಕ್ಕೆ ಕಾರಣವಾಗಬಹುದು. ಮೇಲೆ ಹೇಳಿದಂತೆ 'ಮಾತು ಬೆಳ್ಳಿ ಮೌನ ಬಂಗಾರ' ಎಂದು. ಮಾತನಾಡದೆ ಕುಳಿತರೆ ಅದೇ ಮುಳುವಾಗುವ ಸಾಧ್ಯತೆ ಹೆಚ್ಚು. ಕೆಲವರು ಸಮಯ ಬಂದಾಗ ಒಂದೂ ಆಡುವುದಿಲ್ಲ. ಮತ್ತೆ ಕೆಲವರು ಸಮಯಾ ಸಮಯಗಳ ವಿವೇಚನೆ ಇಲ್ಲದೆ ತಲೆಚಿಟ್ಟು ಹಿಡಿಯುವಷ್ಟು ವಟಗುಟ್ಟುತ್ತಾರೆ. ಒಂದುರೀತಿಯಲ್ಲಿ ನೋಡಿದರೆ ಈ ಎರಡು ಗುಂಪಿನ ಮಂದಿಯೂ ಎಡವಟ್ಟೆ. ಈ ಕಾರಣದಿಂದಲೆ ಇರಬೇಕು ಮಾತು ಒಂದು ಅಪೂರ್ವ ಕಲೆ ಎಂದು ಹೇಳುವುದು. ಮಾತನಾಡಿದರೆ ಕೂತು ಕೇಳುವಂತಿರಬೇಕು. ಆಡುವಾಗ ಒಂದು ಮಾತು ಕಡಿಮೆ. ಉಣ್ಣುವಾಗ ಒಂದು ತುತ್ತು ಕಡಿಮೆ ಉಣ್ಣು ಎಂಬ ಆರೋಗ್ಯ ಸೂಕ್ತಿ ನೆನಪಿಗೆ ಬರುತ್ತದೆ. ಹಾಗೆಯೇ ಅರಿತು ಆಡಿದರೆ ಅದು ನಮ್ಮನ್ನು ಆಪತ್ತಿನಿಂದ ರಕ್ಷಿಸುತ್ತದೆ, ಅದೇ ಮಾತನ್ನು ಅರಿಯದೆ ಆಡಿದರೆ ಆಪತ್ತಿನಲ್ಲಿ ಸಿಕ್ಕಿ ಬೀಳಬೇಕಾಗುತ್ತದೆ. ಬಾಯಿ ಒಳ್ಳೆಯದಾದರೆ ಊರೇ ಒಳ್ಳೆಯದು ಎಂಬಂತೆ ಹಿತಮಿತವನ್ನು ಅರಿತು ಆಡಿದರೆ ಜೀವನದಲ್ಲಿ ಮಾದರಿಯಾಗಿ ಬಾಳಲು ಸಹಾಯವಾಗಬಹುದು.

**ಕೆದಂಬಾಡಿ ಪುಷ್ಪ ತಿಮ್ಮಯ್ಯ, ಕುಂದಚೇರಿ**

---

## ಒಡ್ಪ ಕಥೆ

1. ಅಕ್ಕಂಗೆ ಆರ್ ಕಣ್ಣ್ ಮೂಕಂಗೆ ಮೂರ್ ಕಣ್ಣ್ ನನ್ನಂತಹ ಪಾಪಿಗೆ ಒಂದ್ ಕಣ್ಣ್ ಅದ್ ಎಂತ?
2. ಬಟ್ಟೆ ಬಿಚ್ಚಿ ಗುಂಡಿಗೆ ಹಾರುದು ಅದ್ ಎಂತ?
3. ಒಂದ್ ಕುಪ್ಪಿಲಿ ಎರಡ್ ತರದ ಎಣ್ಣೆ ಅದ್ ಎಂತ?
4. ರಾಜನ ಮಗಳ್ ಬಾಗ್ಲ್ ಕಾದದೆ ಅದ್ ಎಂತ?
5. ಆನೆ ಬಿದ್ದಲ್ಲಿ ಸಾವಿರ ಮೆಟ್ಟಲ್ ಆದ್ ಎಂತ?
6. ನೆಟ್ಟರೆ ಬದುಕುಲೆ ಬಿಸಾಡ್‌ರೆ ಸಾಯದುಲೆ ಅದ್ ಎಂತ
7. ಅಚ್ಚನೆ ತೋಟದಲ್ಲಿ ಬೆಳ್ಳಿಗೂಟಾ ಅದ್ ಎಂತ?
8. ಕರಿ ಕಾಡ್ ಮಧ್ಯಲಿ ಒಂದು ದಾರಿ ಅದ್ ಎಂತ?
9. ಕೆಂಪಣ್ಣನ ಕಾಂಬಕನ ಬಿಳಿಯಣ್ಣ ಉಬ್ಬುದ್ ಅದ್ ಎಂತ?
10. ಹಗ್ಗ ಮೇದದೇ ಎತ್ತ್ ಮಲಗಿಟ್ಟು ಅದ್ ಎಂತ

**ಉತ್ತರ : 1. ಕೋಳಲ್, ತೆಂಗಿನ ಕಾಯಿ, ಸೂಜಿ 2. ಬಾಳೆ ಹಣ್ಣ್ 3. ಕೋಳಿ ಮೊಟ್ಟೆ 4. ಬೀಗ 5. ಹಲಸಿನ ಕಾಯಿ 6. ಕೂದಲ್ 7. ಮೂಲಂಗಿ 8. ತಲೆಲ್ಲಿ ಬಗ್‌ತಲೆ 9. ರೊಟ್ಟಿ 10. ಕೆಂಬಡೆ ಕಾಯಿ**

**ಕೋಟಿಮನೆ ಕವಿತ, ಮದೆ**

---

## ಒಳ್ಳೆ ಮಕ್ಕ

ಅಪ್ಪಹೇಳ್ತ್ ಈಚೆಂವ ಕಣ್ಣ್ ಮುಚ್ಚೋಕು
ಆಗ ಗೊತ್ತಾದೆತ;
ಅವ್ವ ಹೇಳ್ತ್ ಈಚೆವು ಕಣ್ಣ್ ಮುಚ್ಚೋಕು
ಆಗ ಗೊತ್ತಾದೆತ
ಈಗ ಇಬ್ಬೊರೂ ಕಣ್ಣ್ ಮುಚ್ಚಿದೊ ಮಕ್ಕ ಹೆಣನ ಬುಟ್ಟೊ
ಹಣನ ಹೊತ್ತೋ !

**ಬಾರಿಯಂಡ ಜೋಯಪ್ಪ, ಮದೆ**

✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻




✦ ಕೌಂಡಿನ್ಯ

ಧಾರವಾಹಿ -22

ಅರುಂಧತಿ ಮಾರನೆಯ ದಿನ ಬೆಳಿಗ್ಗೆ ಎದ್ದು ರೆಡಿಯಾಗುತ್ತಿರುವಾಗ ಪ್ರಸನ್ನ ಹೊರಟಿದ್ದನ್ನು ನೋಡಿದಳು

ಈಗೆಲ್ಲಿಗೆ ಹೋಗುತ್ತಿದ್ದಾನೆ?

ಅರುಂಧತಿ ಏನನ್ನೋ ಆಲೋಚಿಸಿ ತಾನು ಸಹ ಬಂಗಲೆಯಿಂದ ಹೊರಗೆ ಬಂದಳು

ರಸ್ತೆಯಲ್ಲಿ ಪ್ರಸನ್ನ ಕಾಣುತ್ತಿಲ್ಲ !

ಇಷ್ಟು ಬೇಗ ಎಲ್ಲಿಗೆ ಹೋದ?

ಅರುಂಧತಿ ಈಗ ಊರನ್ನು ದಾಟಿಕೊಂಡು ಕಾಡಿನ ರಸ್ತೆಯ ನಡುವೆ ಒಬ್ಬಳೇ ಬಿರು ಬಿರನೆ ನಡೆಯುತ್ತಿದ್ದಾಳೆ.

ಆಗ ಬೆಳಗಿನ ಹನ್ನೊಂದು ಗಂಟೆ !

ರಸ್ತೆಯ ಎರಡೂ ಬದಿಗಳಲ್ಲೂ ಸಹ ಗಗನ ಚುಂಬಿ ವೃಕ್ಷಗಳು ಬೆಳೆದುಕೊಂಡಿದೆ.

ಹಗಲಲ್ಲೂ ಮಬ್ಬುಗತ್ತಲು !

ಸೂರ್ಯನ ಬೆಳಕು ಬೀಳುತ್ತಿಲ್ಲ, ಮರಗಳು ಅಷ್ಟೊಂದು ದಟ್ಟವಾಗಿ ಬೆಳೆದು ಕೊಂಡಿದೆ.

ಗಾಳಿ ಜೋರಾಗಿ ಬೀಸುತ್ತಿದೆ !

ಅರುಂಧತಿ ಎಲ್ಲಾ ಕಡೆ ಚುರುಕಾಗಿ ನೋಡುತ್ತಾ ಮುಂದೆ ಮುಂದೆ ನಡೆಯುತ್ತಿದ್ದಾಳೆ.

ಆಗ ಕೇಳಿಸಿತು ಶಬ್ದ !

'ಚರಕ್....ಪರಕ್ !'

ಬೆಚ್ಚಿ ಬಿದ್ದು ಹಿಂತಿರುಗಿದಳು !

ಇಲ್ಲ....ಯಾರೂ ಇಲ್ಲ !

ಅರುಂಧತಿಗೆ ಭಯವಾಯಿತು. ಅವಳು ಈಗ ಪುನಹ ಊರಿನ ಕಡೆ ನಡೆಯಲಾರಂಭಿಸಿದಳು ಪುನಹ ಹೆಜ್ಜೆ ಶಬ್ದ !

ಮರಗಳ ನಡುವಿನಿಂದ !

ಯಾರೋ.... ಯಾರೋ ನನ್ನನ್ನು ಹಿಂಬಾಲಿಸುತ್ತಿದ್ದಾರೆ ಎಂದು ಅವಳಿಗೆ ಖಾತ್ರಿಯಾಯಿತು.

ಬಂಗಲೆಯಿಂದ ಪ್ರಸನ್ನ ಹೊರಟಿದ್ದನ್ನು ಕಂಡು ಇವಳು ಅವನನ್ನು ಹಿಂಬಾಲಿಸಿ ಕೊಂಡು ಬಂದಿದ್ದಳು.

ಪ್ರಸನ್ನ ಎಲ್ಲೋ ಹೋರಟು ಹೋಗಿದ್ದ !

ಈಗ ಅವನೇ ಮರೆಯಲ್ಲಿ ಅಡಗಿ ಕೊಂಡು ಹೊಂಚು ಹಾಕಿ ಕಾಯುತ್ತಿರಬಹುದೆ? ಭಯವಾಯಿತು ಅವಳಿಗೆ !

ಹೆಜ್ಜೆ ಶಬ್ದ ! ಬೆನ್ನಿನ ಹಿಂದೆ !

ಸರ್ರನೆ ಹಿಂತಿರುಗಿದಳು.

ಅದಕ್ಕೆ ಬಲಿಷ್ಟವಾದ ಹಸ್ತವೊಂದು ಅವಳ ಕತ್ತಿನ ನರದ ಮೇಲೆ ಬಲವಾಗಿ ಅಪ್ಪಳಿಸಿತು !

ಕಣ್ಣುಗಳ ಮುಂದೆ ಕತ್ತಲು ಕವಿಯುತ್ತಿದೆ ! ಅರೆಬರೆ ಕಾಣುತ್ತಿರುವ ಮರಗಳೆಲ್ಲಾ ತಿರುಗುತ್ತಿರುವಂತೆ ಭಾಸವಾಗಿ ತೂರಾಡುತ್ತಾ ನೆಲಕ್ಕೆ ಕುಸಿದಳು.

ಕಣ್ಣುಗಳನ್ನು ಮುಚ್ಚಿದಳು !

ಪ್ರಜ್ಞೆ ತಪ್ಪುವ ಮುನ್ನ ಅವಳು ಕಂಡಿದ್ದ ಕೊನೆಯ ನೋಟ ಹುತ್ತ ! ನಾಗರ ಹಾವೊಂದು ಹುತ್ತದಿಂದ ಹೊರ ಬಂದು ಮಂದ ಗತಿಯಿಂದ ಹೆಡೆ ಆಡಿಸುತ್ತಿತ್ತು !

* * *

ಊರಿನ ಜನರು ತಲ್ಲಣಗೊಂಡರು

ಇದೇನಿದು ವಿಪರೀತ?

ಮೂರನೆಯ ದುರಂತ !

ಅಬ್ಬ..... ಎದೆ ನಡುಗಿಸುವ ದೃಶ್ಯ ! ಊರಿನ ಜನಗಳು ಗುಂಪು ಗುಂಪಾಗಿ ನುಗ್ಗುತ್ತಿದ್ದಾರೆ.

ಮೂರು ಹುತ್ತಗಳ ಸಂಗಮ !

ಹುತ್ತದಲ್ಲಿದ್ದ ಹಾವುಗಳೆಲ್ಲಾ ಹೊರಬಂದು ಮನುಷ್ಯನ ದೇಹದ ತುಂಬಾ ಸುತ್ತಿಕೊಂಡಿದೆ !

ವಿವಿಧ ರೀತಿಯ ಹಾವುಗಳು!

'ಬುಸ್.... ಬುಸ್'ಎಂಬ ಪೂತ್ಕಾರ !

ಜನಗಳು ಉಸಿರನ್ನು ಬಿಗಿ ಹಿಡಿದು ನೋಡುತ್ತಿದ್ದಾರೆ. ಎಂತಹವರಿಗಾದರು ಭಯ.... ಭಯವಾಗಲೇಬೇಕು !

ಕೊರಡಿನಂತೆ ದೇಹ ಬಿದ್ದಿದೆ !

ಸುತ್ತಿಕೊಂಡಿರುವ ಹಾವುಗಳು !

ಮಂದಗತಿಯಿಂದ ದೇಹದ ತುಂಬಾ ಹರಿದಾಡುತ್ತಿದೆ. ಕೆಲವು ಹಾವುಗಳಲ್ಲಿ ಚಲನೆ ಇಲ್ಲ !

ಗುಂಪಿನಲ್ಲಿ ರೇವತಿ, ಶ್ರೀಕಂಠ ಮತ್ತು ದೇವಸ್ಥಾನದ ಪೂಜಾರಿ ಸಹ ಇದ್ದಾನೆ !

ರೇವತಿ ಭಯ ಪಡುತ್ತಿಲ್ಲ ! ಅವಳೀಗ ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದಾಳೆ.

'ಅಬ್ಬ'.... ಎಂದು ಉದ್ಗಾರ !

ರೇವತಿಗೆ ಇದನ್ನು ನೋಡುತ್ತಿರುವಂತೆಯೇ ಇದು ಪವಾಡ ಅಲ್ಲ ಅನಿಸಿತು ! ಮನುಷ್ಯನ ಚಮತ್ಕಾರ !

ಏನೋ ..... ಏನೋ.... ಇದೆ !

ಅದೇನು ಎಂದು ಗೊತ್ತಾಗುತ್ತಿಲ್ಲ !

ಹಾವುಗಳ ಚಲನೆಯನ್ನು ಗಮನಿಸುತ್ತಿದ್ದಾಳೆ. ಅದರಲ್ಲೇ ಅವಳಿಗೆ ಅದೇನೋ ಅಸಹಜತೆ ಕಂಡುಬಂದಿದೆ.

ಸಮ್‌ಥಿಂಗ್ ಈಸ್ ರಾಂಗ್ !

ಈಗ ಎಡತೊರೆ ಮನೆತನದ ಜೀಪು ಮತ್ತು ಕಾರು ತುಂಬಾ ಸ್ಪೀಡಾಗಿ ಅಲ್ಲಿಗೆ ಬಂದಿತು !

ಅದರಿಂದ ಅಣ್ಣಂದಿರು ಇಳಿದರು !

ಜೀಪಿನಿಂದ ಪ್ರಸನ್ನ ಇಳಿದನು.

ಅಣ್ಣಂದಿರು ಈ ದೃಶ್ಯವನ್ನು ಪಿಳಿ ಪಿಳಿ ಕಣ್ಣು ಬಿಡುತ್ತಾ ನೋಡುತ್ತಿದ್ದಾರೆ. ಅವರು ನಿರ್ಲಿಪ್ತರಾಗಿದ್ದಾರೆ.

(19ನೇ ಪುಟಕ್ಕೆ)

**ಇಲ್ಲಿಯವರೆಗೆ.........**

ರೇವತಿಯನ್ನು ಶ್ರೀಕಂಠ ಪೂಜಾರಿ ಎಚ್ಚರಿಸುತ್ತಾರೆ. ರೇವತಿ ಹಟ ಬಿಡುವುದಿಲ್ಲ. ಪ್ರಸನ್ನನ ಮೇಲೆ ಗುಂಡು ಹಾರಿಸುವ ಪ್ರಯತ್ನ ನಡೆಯುತ್ತದೆ. ಈ ಕೆಲಸವನ್ನು ಅಕ್ಕ ಮಾಡಿದ್ದಾಳೆ ಎಂದು ಗೊತ್ತಾಗುತ್ತದೆ. ಪ್ರಸನ್ನ ಕೋಪದಿಂದ ಸೇಡು ತೀರಿಸಿಕೊಳ್ಳಲು ನಿರ್ಧರಿಸುತ್ತಾನೆ.

**ಮುಂದೆ ಓದಿ.........**

*******************************************

## ಅಣ್ಣುನ ಪಜೀತಿ

ಮೊನ್ನೆ ನಾನ್ ಬಾಮಿ ಕರೆ ಮನೆಗೆ ಹೋಕಾಕನ, ದಾರಿಲೇ ಅಣ್ಣು ಹೈದ ಸಿಕ್ಕಿತ್. ಅಂವಯಾಗಳೂ ಕಾಣಿಕೆ ಮುಂದೇನೇ ಹಾರಿಕಂಡ್ ಮಾತಾಡ್ಸಿಕೆ ಬರ್‍ತಿದಂವ ಇಂದ್ ಹತ್ರ ಹೋದ್ರೂ ಉಸ್ರೇ ಬಿಡ್ತಾ ಇಲ್ಲೆ. ಯಾಗೋಳು ಚೈಚೈತ ಆಡ್ತಿದಂವ ಇಂದ್ ಕಪಿ ಸತ್ತ ಕೊರಮನಂಗೆ ಕುದ್ದದ್ ಕಂಡ್ ಎಂತೋ ಬಾರಿ ವಿಷಯನೇ ಆಗಿರ್‍ದ್ವಿತ ಗ್ಯಾನ ಮಾಡ್ದೆ. ಇಂವ ಇಲ್ಲೇ ಸಿಕ್ಕಿದ ಮೇಲೆ ಅಂವನ ಮನೆಗ ಮತ್ತೆಂತಕೆ ಹೋದುತ ಹೇಳ್‌ತ ನಾನೂಸ ಅಲ್ಲೆ ಕುದ್ದೆ.

ಅಣ್ಣುನೊಟ್ಟಿಗೆ ಕುದ್ದ್‌ಕಂಡ್ ಎಂತ ಹೇಳ್ರೂ-ಕೇಳ್ರೂ ಅಂವ ಮಾತ್ರ ಉಸ್ರೇ ಬಿಡೊಂಗಿಲ್ಲೆ. ಚೆಡ್ಡಿ ದೋಸ್ತಿ ಬೇರೆ ವಿಷಯ ತಿಳ್‌ಕಂಡೆ ಇದ್ರೆ ನಂಗೂ ರಾತ್ರಿ ನಿದ್ದೆ ಬಾಕಿಲ್ಲೆತ ಗ್ಯಾನ ಮಾಡಿ ಮತ್ತೆ ಮತ್ತೆ ಅವ್ನ ಕೇಳ್ಳಾಕನ ಮೆಲ್ಲೆ ಉಸ್ರ್ ಬಿಡ್ಕೆ ಸುರ್ ಮಾಡ್ತ್.

ಕಳ್ದ ಬೇಸ್ತಾರ ಈರಪ್ಪ ಮಾಂವನ ಮಂಜ್ಜನ ಮದ್ವೆಗೆ ಮಡಿಕೇರಿಗೆ ಹೋಗಿತ್ತ್ ಗಡ. ಅಲ್ಲಿ ಅಣ್ಣುನ ಕ್ಲಾಸ್ ಮೇಟ್‌ಗ ಸುಮಾರ್ ಜನ ಬಂದಿದ್ದೊ ಗಡ. ಈಗ ಇವನ ಪೈಕಿ ಹುಡುಗರ್‍ಲಿ ಇವಂಗೆ ಮಾತ್ರ ಇನ್ನೂ ಮದ್ವೆ ಆತ್ಲೆ. ಉಳ್ದವ್ ಎಲ್ಲಾಕು ಮದ್ವೆ ಆವ್ವು. ಎಲ್ಲಾವು ಸೇರ್‍ರ್ಕಾಕನ ಇವಂಗೆ ತಮಾಷಿ ಮಾಡ್ದೊ. ನೀನೂ ಬೇಗ ಮದ್ವೆ ಆಗುತಾ. ಇಂವ ಮೊದ್ಲೆ ಸ್ವಲ್ಪ ಪೆದ್ದ. ಹೆಂಗೆ ಆದು ತ ಕೇಳ್ತ್ ಗಡ. ಆಗ ಆ ಸುರೇಶ ಹೈದ ಇವಂಗೆ ಈ ಮದ್ವೇ ಮನೇಲೇ ಯಾವ್ವಾರ್ ಒಂದು ಗೂಡೆನ ನೋಡಿಕ. ಮುಂದೆ ಮಾತ್-ಕತೆ ನಾವೇ ಮಾಡುವೆ ತಾ ಭರವಸೆ ಕೊಟ್ಟುಟು. ಇದ್ರ ಕೇಳಿ ಮದ್ವೇ ಮಾಡಿಕಂಬದು ಎಷ್ಟ್ ಸುಲ್ಪತ ಅಣ್ಣುಗೆ ಬಹಳಾ ಕುಶಿ ಆವ್ವು.

ಗೂಡೆನ ನೋಡ್ದು ಹೆಂಗೆತ ಗ್ಯಾನ ಮಾಡಿಕಂಡ್ ಕುದ್ದ ಅಣ್ಣುಗೆ ಒಂದ್ ಒಳ್ಳೆ ಉಪಾಯ ಹೊಳ್ದುಟ್ಟು. ಮದ್ವೆಗೆ ಬಂದ ಗೂಡೆಗ ಹಣ ಕಟ್ಟೆಕ್ಕೆ ಬಂದೇ ಬಂದವೇತ ಗ್ಯಾನ ಮಾಡಿ ಮಂಟಪದ ಎದ್ರ್‌ನೇ ಕುರ್ಚಿ ಹಾಕಿಕಂಡ್ ಕುದ್ದತ್ ಗಡ. ಬಂದ ಗೂಡೆಗಳ ನೋಡ್ರೆ ಒಂದಕಿಂತ ಒಂದ್ ಬಳಾ ಲಾಯ್ಕ ಕಂಡದೆ ಗಡ. ಆಖ್ರಿಗೆ ಮದುವಳಿಗೆನ ಫ್ರೆಂಡ್ ಅಂಜು ತ್ಲೇಳೋ ಗೂಡೆ. ಇವಂಗೆ ಬಾಳ ಇಷ್ಟ ಆಗೊವ್ವು. ಮದ್ವೇ ಆದ್ರೇ ಇದೇ ಗೂಡೆನತ ಡಿಸೈಡ್ ಮಾಡಿಬಡ್ತ್ ಗಡ.

ಹಣ ಕಟ್ಟಿ ಸ್ಟೇಜ್ ಇಳ್ದ ಗೂಡೆ ಫ್ರೆಂಡ್ಸ್‌ಗಳ ಜೊತೇಲಿ ಬಂದ ಅಣ್ಣು ಕುದ್ದ ಕುರ್ಚಿ ಪಕ್ಕಲೇ ಕುದ್ದತ್ ಗಡ. ಇದರ್ಂದ ಅಣ್ಣುಗೆ ಇನ್ನೂ ಖುಷಿ ಆವ್ವು. ಗೂಡೆನ ನೋಡಿಕಂಡ್ ನೆಗಾಡಿಕೆ ಸುರು ಮಾಡ್ತ್ ಗಡ. ಗೂಡೆ ಇವ್ನ ಕಡೆ ನೋಡ್ತಾನೇ ಇಲ್ಲೇ. ಇವಂಗೆ ಇಂದ್ ಬಿಟ್ರೆ ಈ ಗೂಡೆ ಮತ್ತೆ ಸಿಕ್ಕುಲ್ಲೆ ತೇಳೋ ಹೆದ್ರಿಕೆ ಬೇರೆ. ಇವಂಗೆ ಎಂತ ಮಾಡ್ದುತ ಗೊತ್ತಾತ್ಲೆ. ಯಾವ್ದೊ ಫಿಲಂಲಿ ನೋಡ್ದಂಗೆ ಸೀದಾ ಎದ್ದ್ ಹೋಗಿ ಗೂಡೆನ ಕೈ ಹಿಡ್ದ್ "ಐ ಲೌ ಯೂ" ತ ಜೋರಾಗಿ ಹೇಳ್ತ್ ಗಡ. ಅಷ್ಟೊತ್ತಿಗೆ ಸಮಾಜಲಿದ್ದವು ಎಲ್ಲಾ ಇವರ್‍ನೇ ನೋಡಿಕೆ ಸುರು ಮಾಡ್ಯೊಳೊ. ಗೂಡೆಗೆ ಹೆದ್ರಿಕೆ ಜೊತೆಗೆ ನಾಚಿಕೆ ಆಗಿ ಮರ್ಸ್‌ಕಂಡ್ ಅಣ್ಣುನ ಕೆಪ್ಪೆಗೆ 'ಟೈ'ತ ಒಂದ್ ಕೊಟ್ಟುಟ್ಟು. ಅಂದ್ ಮದ್ವೆ ಮನೆಂದ ಊಟ ಮಾಡ್ದೆ ಬಂದ ಅಣ್ಣು ಇಂದಿಗೆ ಮುಟ್ಟ ಯಾರೊಟ್ಟಿಗೆ ಕೂಡಾ ಮಾತಾಡ್ತಾ ಇಲ್ಲೆ. ಇಷ್ಟ್ ವಿಷಯ ಅವ್ನ ಬಾಯಿಂದ ಕೇಳ್ ಕಾಕನ ನಂಗೆ ಬಹಳಾ ಸುಸ್ತ್ ಆಗಿ ಹೋತ್. ಇನ್ ಮುಂದಕ್ಕೆ ಯಾವ ಗೂಡೆಗಳ ಸುದ್ದಿಗೆ ನಾನ್ ಹೋಲೆತ ಅಣ್ಣು ಪ್ರಮಾಣ ಮಾಡಿ ಹೇಳ್ಯಾವುಟ್ಟು. ನಿಮ್ಮಲ್ಲಿ ಯಾವ್ವಾರ್ ಗೂಡೆ ಇದ್ರೆ ನಮಿಗೆ ತಿಳ್ಸಿ ಅಣ್ಣುಗೆ ಬರೊ ಬೇಸಿಗೆಲಿ ಮದ್ವೆ ಮಾಡಕುತ ಒಳೊ.

**ಗೋವಿಂದಮ್ಮನ ಪ್ರವೀಣಕುಮಾರ, ಬೆಂಗಳೂರು**

---

### ಸುಖಿಕೆ ಸೊನ್ನೆ ಮತಾಂತರದಿ

ಜೀವನ ಸಾಗದು ಮತಾಂತರದಿ
ಬಾಳು ನೀ ಮಾನವ ಸ್ವಧರ್ಮದಲೀ।
ಸುಖಿಕೆ ಸೊನ್ನೆ ಮತಾಂತರದಿಂದ
ಸಂಖ್ಯೆಯ ಹೆಚ್ಚಿಸಿ ಏನಿದೆ ಲಾಭ? ||೧||

ವಿದೇಶಿ ಮಿಷನರಿಗಳ ಹೊರದಬ್ಬಿ
ಸ್ವತಂತ್ರಾ ಸ್ವಧರ್ಮದಿ ನೀವ್ ಬಾಳಿ
ಭಾರತ ಪುತ್ರರೇ ಸ್ವದೇಶಿ ಸಂಸ್ಕೃತಿ
ವಿಶ್ವದಿ ಹಿರಿದು ಮರೆಯದಿರಿ ||೨||

ಹಿಂದು ಜನರನು ವಂಚಿಸುವವರು
ದೇಶದ ರಕ್ಷಣೆ ಮಾಡುವುದುಂಟೆ?
ಮತಾಂತರ ಆಮಿಷ ನೀಡುವತಂಡ
ರಕ್ತವ ಹೀರುವ ಜಿಗಣೆಗಳೇ ||೩||

ಪ್ರಜಾ ಪ್ರಭುತ್ವದ ರಾಷ್ಟ್ರದಲಿ
ವಿಧರ್ಮಿಯರಿಗೆ ಕಿರುಕುಳವೇಕೆ?
ಸರ್ವಧರ್ಮವು ದೇವರ ಸೃಷ್ಟಿ
ಬಾಳಲು ಕಲಿಯಿರಿ ಶಾಂತಿಯಲಿ ||೪||

ಮತಾಂತರವಾದರೆ ಏನಿದೆಲಾಭ?
ದುಡಿಯದೆ ಹೊಟ್ಟೆಯು ತುಂಬುವುದೇ
ದೇವರು ಒಬ್ಬನೇ ಲೋಕದಲಿ
ಸರ್ವಮತಗಳ ಸ್ಥಾಪಕನವನೇ ||೫||

ಅವತರಿಸಿ ಜನರನು ತಿದ್ದಿದನು
ಆಗಲೇ ಹುಟ್ಟೊಕು ನವ ಮತವು
ಸಕಲ ಮತಧರ್ಮಗಳ ಸಾರ
ಸತ್ಯ ಅಹಿಂಸೆ, ಶಾಂತಿ ಪ್ರೇಮವು ನೋಡ ||೬||

(ವಿದೇಶಿ ಜನರು ಭಾರತಕ್ಕೆ ಬಂದು, ಹಿಂದು, ಜನರನ್ನು ಮತಾಂತರಗೊಳಿಸುತ್ತಿರುವುದನ್ನು, ಮುಗ್ಧರನ್ನು ಮೋಸಗೊಳಿಸುತ್ತಿರುವುದನ್ನು ನೋಡಿ. ನೊಂದು ಬರೆದ ಕವನ ರಚನೆ 1-11-1998)

**ವಾಣಿಕುಮಾರ್, ಮಂಡೆಕೋಲು, ಸುಳ್ಯ**

✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

(ಹಿಂದಿನ ಸಂಚಿಕೆಯಿಂದ)

ಮಕ್ಕಳ ಮಾತ್‌ನ ಕೇಳ್ಸಿಕಂಡ ಅಮ್ಮ ಅಡಿಗೆ ಮನೆ ಒಳಗೆಂದ ಓಡಿಬಂದ್ ಮಂಚನ ಎದುರಿಗೆ ಬಂದ್ ನಿಂತತ್. ಸಿಟ್ಟ್‌ಬಂದ್ ಬುಸುಗುಟ್ಟುತಿದ್ದ ಬೋಜಪ್ಪ ಈ ಸೂಳೆಮಂಜ್ನ ನನ್ನ ಹಾಳ್‌ಮಾಡಿಬುಡ್ತ್. ಯಾಗ ನೋಡ್ರೂ ಗೂಡೆಗಳೊಟ್ಟಿಗೆ ಸುತ್ತಾಡಿಕೆ ಮಾತ್ರ ಇಂವ ಲಾಯಕ್ಕ್ ಸ್ವಲ್ಪನೂ ಜವಾಬ್ದಾರಿ ಇಲ್ಲ ಕೋಣತ್ತೇಳಿಕಂಡ್. ಮಂಜನ ಹೆಗಲ್‌ಮೇಲೆ ಎರಡ್ ದೊಣ್ಣೆಲ್ ಬುಟ್ಟಿತ್. ಪೇಟೆಲಿದ್ದ ನನ್ನ ಬಟ್ಟೆ ಅಂಗಡಿನೂ ದಿವಾಳಿ ಎಳ್ಸಿ ಆತ್. ಇಲ್ಲಿ ಕಾಫಿ ಮಾರ್ದ ದುಡ್ಡುನೂ ನುಂಗಿ ಆತ್‌ತಾ ಹೇಳಿಕಂಡ್ ಬೆನ್‌ಮ್ಯಾಲೆ ಎರಡ್ ಬಾರ್ಸಿತ್. ಅಡ್ಡ ತಡಿಯಕೆ ಬಂದ ಅವ್ವನ ಮೊಣಕೈಗೆ ಏಟ್ ಆಗಿ ಕೈಬಳೆ ಎಲ್ಲಾ ಒಡ್ದ್ ಚೂರ್‌ಚೂರ್ ಆಗಿಪೋತ್. ನನ್ನ ದಿವಾಳಿ ಮಾಡಿಹಾಕಿ ಬುಡ್ತ್ ಈ ನೀಚ ಮಂಜ ಕಾಲೇಜ್‌ಗೆ ಹೋನೆತ್ತೇಳಿಕಂಡ್ ಗೂಡೆಗಳ ಸುತ್ತ ಚೆಲ್ಲಾಟ ಆಡಿಕಂಡ್ ಮಜಾ ಉಡಾಯಿಸುತಾ ಉಟ್ಟ್ ಈ ನಾಯಿ ತೇಳಿಕಂಡ್ ಪೆಟ್ಟ್ ಬೀಳುತಲೇ ಉಟ್ಟು. ರಾಜು ಏಟ್‌ಗೆಲ್ಲಾ ಅಡ್ಡ ಕೈಹಿಡ್ಕಂಡ್ ಇಲ್ಲೆ ಪಪ್ಪ ಹಂಗಿಲ್ಲೇ ಪಪ್ಪಾ, ನನ್ನ ಹೊಡಿಬೇಡ ಪಪ್ಪಾ ತಾ ಕಿರ್‌ಚಿಕಂಡ್ ಹೇಳುತನೇ ಉಟ್ಟು. ಆದ್ರೇ ಪಪ್ಪಂಗೆ ಇದ್ಯಾವುದೂ ಕಿವಿಗೆ ಬೀಳ್‌ತನೇ ಇಲ್ಲೆ ಯಾಕೆತ್ತೇಳ್ರೇ ಈಗ ರಾಜಾರೋಷ ಆಗಿ ಪಪ್ಪ ಎದುರುಗೇ ಎರಡ್ ಹೆಣ್ಣ್ ಮಕ್ಕಳ ಗಾಡಿ ಹಿಂದೆ ಕೂರ್ಸಿಕಂಡ್ ಬಂದದರ್ನ ತನ್ನ ಕಣ್ಣ್‌ಲೇ ಕಂಡೊಳಲ್ಲಾ? ಯಾಗೋಳು ಎಷ್ಟ್ ಹೇಳಿರೂ ಇಂವ ಮನೆಗಾಗಲೀ, ಪೇಟೆಲಿ ಬಟ್ಟೆ ಅಂಗಡಿಗಾಗಲಿ ಬಂದ್ ನೋಡಿ ಕಂಡಂವ ಅಲ್ಲ ಯಾಗ ನೋಡ್ರೂ ಅಲ್ಲಿ ಸ್ಪೋರ್ಟ್ಸ್ ಉಟ್ಟು ಇಲ್ಲಿ ಮ್ಯಾಚ್ ನಡಿತಾ ಉಟ್ಟುತ್ತೇಳಿಕಂಡ್, ಹಣ ಕರ್ಚ್ ಮಾಡಿಕಂಡ್ ತಿರುಗಾಡುದೇ ಆಗಿ ಹೋತ್, ಯಾವ ಒಂದು ಜವಾಬ್ದಾರಿನ ಹೊತ್ತ್‌ಕಣ್‌ದೆ ಗೂಳಿತರ ತಿರ್‌ಗಾಡಿಕಂಡ್ ಲಕ್ಷಾಂತರ ರೂಪಾಯಿಗಳನ್ನ ಹಾಳ್‌ಮಾಡಿ ಆಗುಟ್ಟು. ಈಗ ನೋಡ್ರೆ ಮಗಳ ಮದ್ವೆಗೆ ಖರ್ಚು ಅಲ್ಲದೆ ಒಂದ್ ಲಕ್ಷವರ ದಕ್ಷಿಣೆನೂ ಜೊತೆ ಹೊಂದ್ಸುಕು. ಇದೆಲ್ಲಾ ತೊಂದ್ರೆಗ ಒಟ್ಟಿಗೆ ಕಣ್ ಮುಂದೆ ಬಂದಾಕನ ಬೆಳ್ದ್‌ನಿಂತ ಒಬ್ಬನೇ ಒಬ್ಬ ತನ್ನ ಮಂಜ ಈತರ ನಂಗೆ ಕಷ್ಟ ಕೊಟ್ಟಿತಲ್ಲಾ ತ್ತೇಳಿಕಂಡ್ ಅಪ್ಪನ ಸಿಟ್ಟ್ ನೆತ್ತಿಗೇರಿತ್ ಮಂಜಂಗೆ ಹೊಡ್ದ್ ಹೊಡ್ದ್ ಸುಸ್ತ್ ಆದ ಮೇಲೆ ಬೋಪಜ್ಜ ಬೆತ್ತದ ದೊಣ್ಣೆನ ಬಿಸಾಕಿ ತನ್ನ ತಲೆ ಮೇಲೆ ಕೈಹೊತ್‌ಕಂಡ್ ಬಿಕ್ಕಳಿಸಿಕಂಡ್ ಬೇಜಾರ್ ಮಾಡಿಕಂಡ್ ಐಮರ ಮೇಲೆ ದಸ್ಸಕತ ಕುದ್ದೇಬುಟ್ತೊ. ಆದ್ರೂ ಮಂಜ ರಾಜು ಸಿಟ್ಟ್‌ಮಾಡಿಕಣದೆ ಪಪ್ಪನ ಸಮಾಧಾನ ಮಾಡಿಕೆ ಹತ್ರ ಹೋತ್, ಮಗಳೂ ಅವ್ವನೂ ಆತ್ ಸಮಾಧಾನ ತಂದ್‌ಕಣೆತ್ತೇಳಿಕಂಡ್ ಹತ್ರಹೋದೊ? ಆಗ ಬೋಪಜ್ಜ ಸಿಟ್ಟ್ ದುಃಖನ ತಡ್‌ಕಂಡ್ ಹೇ ನೀವೆಲ್ಲಾ ನಾಯಿಗ ಈಗ ನನ್ನ ಹತ್ರ ಏನೂ ಬೊಗುಳುದು ಬ್ಯಾಡ ನಂಗೆ ಎಲ್ಲಾ ಗೊತ್ತುಟ್ಟು ಅಂದ್ರೇ ನೀನ್ ಹೋಗಿ ಈಗ ಒಂದ್ ಲಕ್ಷರೂಪಾಯಿನ ತಿಂಗಳೊಳಗೆ ಸಂಪಾದಿಸಿಕಂಡ್ ಬಾ ನಾನೂ ನೋಡಿನೆ. ನೀನ್ ನನ್ನ ಮಂಜ ಅಲ್ಲ ನೀನೊಂದು ನಾಯಿ, ನಾನೇನ್ ಮಾಡ್ಲಿ ಈಗ, ನಾನ್ ಸತ್ತು ಹೋದೇ ವಾಸಿ ಈಗ ನನ್ನ ಕೂಸ್‌ನ ಮದ್ವೆಗೆ 2ಲಕ್ಷ ರೂಪಾಯಿ ಆಕೊಲ್ಲಾ? ನಾನ್ ಹೆಂಗೆ ಅಷ್ಟ್ ಹಣನ ಹೊಂದ್‌ಸಲಿ? ತಾ ಆವೇಶಲಿ ಹೇಳಿಕಂಡ್ ಬಿಕ್ಕಳಿಸಿಕೆ ಶುರುಮಾಡ್ದೊ.

ಈ ಆಕಸ್ಮಿಕ ಎಟ್ಯಾಕ್‌ನ ಜೊತೆಲಿ ಬಂದ ಈ ಎರಡ್ ಹೆಣ್ಣ್‌ಮಕ್ಕಕಂಡ್ ಕೊತ್ತಿಮರಿಗಳಂಗೆ ಮೆಲ್ಲಂಗೆ ರೂಂ ಒಳಗೆ ಸೇರಿಕಂಡ್ ಪಿಳಿಪಿಳಿತಾ ಕಣ್ ಬುಡುತಿದ್ದೊ. ಪಪ್ಪಂಗೆ ಎದುರಾಗಿ ಯಾರೊಬ್ಬರೂ ಪಿಟ್ಟಿತ ಉಸ್‌ರ್ ಬಿಟ್ಟತಿಲ್ಲೆ ಯಾಕೆತ್ತೇಳಿರೆ ಬೋಜಪಜ್ಜಂಗೆ High. B.P. problem ಇರ್ದುದರಿಂದ ಯಾರೂ ತಿರ್ಗಿ ಮಾತಾಡುದಿಲ್ಲೆ. ಈಗ ಮನೆ ಒಳಗಡೆ ಎಲ್ಲವೂ ದೆವ್ವ ಹಿಡ್ದಂಗೆ ಗಾಭರಿಲಿ ಹೆದ್ರಿಕಂಡ್ ಅಡಿಗೆ ಮನೆ ಒಳಗಡೆ ಒಟ್ಟಿಗೆ ಸೇರಿಕಂಡ್ ಮಣೆಹಾಕಂಡ್ ಸುಮ್ಮನೆ ಕುದ್ದಿದ್ದೊ. ಯಾರಿಗೂ ಊಟಕ್ಕೂ ಸಹ ಮನ್ಸಿಲ್ಲೆ. ಎಲ್ಲಾ ಹಂಗೆ ಹಂಗೆ ಆ ಮೇಲೆ ಮಲಗಿಕಂಡೊ.

ರಾತ್ರಿ ಎಲ್ಲಾ Mr. ರಾಜುಗೆ ನಿದ್ದೆ ಬಾತ್‌ಲ್ಲೆ. ಅಂವಂಗೆ, ತನ್ನ ಜೊತೆ ಬಂದಿದ್ದ ಆ ಗೂಡೆಗಳ ಎದ್‌ರ್‌ಗಡೆ ಪಪ್ಪ ಇಷ್ಟೊಂದ್ ಅವಮಾನ ಮಾಡಿದಕ್ಕೆ ತುಂಬಾ ಬೇಜಾರ್ ಆಗಿ ಹೋಗಿತ್ ಈ ಪಪ್ಪಂಗೆ ಇಷ್ಟೊಂದ್ ಸಿಟ್ಟ್ ಬಾಕೆ ಕಾರಣ ಆ ಹಾಳ್ ಬಾವೀ ಬಾವ ಭಾರವಾದ ವರದಕ್ಷಿಣೆ ಕೇಳಿದ್ದೇ ಕಾರಣ ಅಂವಂಗೆ ಗೂಡೆಜೊತೆಗೆ ವರದಕ್ಷಿಣೆನೂ ಬೇಕುತ್ತೇಳುವ ಧನ ಪಿಶಾಚಿಕಂಡದೆ ಅಂವಂಗೆ ಲಕ್ಷರೂಪಾಯಿ ಕೊಡದಿದ್ರೆ ನನ್ನ ತಂಗೆನ ಮದುವೆ ಆಕೆ ಒಪ್ಪಿಕಿಲ್ಲೆ, ಅಯ್ಯೋ ನನ್ನ ತಂಗೇನ ಮದುವೆ ಮಾತ್ರ ಈ ಕಾರಣಕ್ಕೋಸ್ಕರ ನಿಲ್ಲಿಕ್ಕಾಗದ್, ಇದಕ್ಕೆ ಈಗ ನಾನ್ ಒಂದ್ ವ್ಯವಸ್ತೆನ ಮಾಡಿನೆ ಇದ್ ನನ್ನ ಕರ್ತವ್ಯ ಕೂಡಾ ಹೌದು, ಪಾಪ ವಯಸ್ಸಾದ ನನ್ನ ಪಪ್ಪ ಹೆಂಗೆ ಮಾಡುದು? ಗೀತಾ, ಗೀತಾ ಬಾ ಇಲ್ಲಿ ತಾ ಮಲಗಿದಲ್ಲಿಂದಲೇ ತನ್ನ ತಂಗೆನ ರಾಜು ಕರ್ತ್ ತಂಗೆ ಎದ್ ಬಂದ್, ಅಣ್ಣಯ್ಯ ಏಳ್ ನೀನ್ ಸ್ವಲ್ಪ ಅನ್ನ ಊಟಮಾಡ್ ಈಗ್ಲೇ 11 ಗಂಟೆ ಆಗುಟ್ಟು ನಿಂಗೆ ಮಧ್ಯಾನನೂ ಊಟ ಆಗಿರ್‌ಕಿಲ್ಲೆ ತೇಳಿ ಅವನ ತಲೆಸವರಿ ಸಮಾಧಾನ ಮಾಡಿ ಉಟಕ್ಕೆ ಏಳ್ಸಿತ್.ಆಗ ರಾಜುಗೆ ದುಃಖ ಉಮ್ಮಳಿಸಿಬಾತ್, ತಂಗೆನ ಕೈಹಿಡ್ದ್ ಕೂರಿಸಿಕಂಡತ್ ನಂದ್ ಊಟ ಇರಲಿ ನಿಂದ್ ಆಗುಟ್ಟಾ? ಅದ್ ಇರಲಿ, ಬೆಳಿಗ್ಗೆ ಬಂದಿದ್ದ ನೆಂಟ್ರ್‌ಗ ಏನ್ ಹೇಳ್ದೋ ಹೇಳ್? ನಿಂಗೆ ಆ ಗಂಡ್ ಒಪ್ಪಿಗೇನಾ? ನಿನ್ನ ಮನ್ಸಿಗೆ ಹಿಡ್ಸಿತಾ? ತಾ ತಂಗೆನ ತಲೆ ಸವರಿಕಂಡ್ ಕೇಳ್ತ್. ಇವಳು ತಲೆ ತಗ್ಗಿಸಿ ಕಂಡೇ ಗಂಡೇನೋ ನೋಡಿಕೆ ಒಳ್ಳೆ ಪೊರ್ಲು ಒಳೂ ಆತಾ - ಅಂವ ಪುತ್ತೂರು ವಿಜಯ ಬ್ಯಾಂಕಲಿ ಕ್ಲಾರ್ಕ್ ಆಗುಟ್ಟುಗಡ! ಆತಾ ಅಂವಂಗೆ ಮೈಲಸ ಪೋಸ್ಟ್‌ಗೆ ಹೋಕೆ ಒಂದು ಲಕ್ಷರೂಪಾಯಿ ಬೇಕ್‌ಗಡ. ಅದ್‌ಕೇ

***************************************************

ಅದ್‌ಕೇ ನಾವ್ ಕೊಡಿಕೆ ಆದುಲ್ಲೆತ್ತೇಳಿರೆ ಅಂವಂಗೆ ಬೇರೆ ಕೊಟ್ಟ್ ಮದುವೆ ಮಾಡವ ಜನ ಒಳಗಡ , ಅದಕ್ಕೆ ಪಪ್ಪ ಒಪ್ಪಿಕಂಡ್ ಬುಟ್ಟ್ರೋಳು. ಪಪ್ಪ ಮಡಿಕೇರಿಲಿ ಇರ್ಬನಮ್ಮ ಬಟ್ಟೆಶಾಪ್ ಬೆರೆಯವುಕೆ ಮಾರಿ ಬುಟ್ಟವೆಗಡ, ಅದ್‌ಕೇ ಅಮ್ಮಂಗೂ ತುಂಬಾ ಬೇಜಾರ್ ಆಗುಟ್ಟು, ಬುಡು ಅಣ್ಣಯ್ಯ- ನಂಗೇನ್ ಈಗ ಇಷ್ಟ್ ಆತುರಲಿ ಮದುವೆ ಬೇಡ ವರದಕ್ಷಿಣೆ ತಕಂಡ್ ಮದುವೆ ಆದುವ ಆ ಗಂಡೂ ನಂಗೆ ಬೇಡ ಅಣ್ಣಯ್ಯ ಅಂವ ಅಲ್ಲದಿದ್ರ ನಿಧಾನಕ್ಕೆ ಬೇರೆಕಡೆ ಯಾರ್‍ಯಾರ್ ಬಾಕಿಲ್ಲಾ ಏಳ್ ನೀನ್ ಉಟಮಾಡ್‌ತ ತಂಗೆ ಹೇಳ್ತ್,

ಗೀತಾ ನೀನ್ ನನ್ನ ಮುದ್ದು ಮರಿ ತಂಗೆ ಅಲ್ಲವ್ವಾ ನಿಂಗೆ ಆ ಗಂಡ್‌ನ ಇಷ್ಟಾದ್ ಮುಖ್ಯ. ಅದ್ ಮದ್ವೆಗೆ ಎಷ್ಟ್ ಖರ್ಚಾದರೂ ಸರಿ, ನೀನ್ ಬೇಜಾರ್ ಮಾಡ್‌ಬ್ಯಾಡ ಸರಿಯಾಗಿ ಒಂದ್ ತಿಂಗಳ ಒಳಗೆ ನಿನ್ನ ಮದುವೆ ಆ ಹುಡುಗನ ಜೊತೆ ನಡ್ವೇ ನಡ್ವದೆ, ನಾನ್ ಅಂವಂಗೆ ಕೊಡಿಕೆ ಇರುವ ಒಂದ್ ಲಕ್ಷರೂಪಾಯಿನ ತಂದೇ ತಂದನೆ, ನಿನ್ ಪಪ್ಪಂಗೆ ಹೇಳ್ ನಮ್ಮ ಮಡಿಕೇರಿ ಅಂಗಡಿನ ಮಾರುದು ಬ್ಯಾಡತಾ ಆತಾ? ಮದುವೆ ಏರ್ಪಾಡ್ ಎಲ್ಲಾ ಮಾಡಲಿ ನೋಡ್ ನಂಗೆ, ಹಠ ಉಟ್ಟು, ಆತ್ಮಬಲ ಉಟ್ಟು ನನ್ನ ಬುದ್ದಿವಂತಿಕೆ ಮೇಲೆ ನಂಗೆ ಭರವಸೆ ಉಟ್ಟು, ಎಂತಹ ಕೆಲ್ಸನ್ನಾದ್ರೂ ಮಾಡುವಂತಹ ಶಕ್ತಿ ನನ್ನಲ್ಲಿ ಉಟ್ಟು. ಆದ್ರಿಂದ ನೀನ್ ಧೈರ್ಯ ಆಗಿ ಇರ್ ಕುಷಿಯಾಗಿರ್ ತಾ ಹೇಳಿ ಅವಳ ಬೆನ್ನ್ ತಟ್ಟಿ ಹೂಂ ಹೋಗಿ ಒಂದ್ ತಟ್ಟೇಲಿ ಅನ್ನನ ಹಾಕಂಡ್ ಬಾ ಇಂದ್ ನಿನ್ನ ಕೈಯಿಂದ ಒಂದು ತುತ್ತ್ ಅನ್ನನ ನಾನು ತಿಂಬೋಕು ತಾ ಹೇಳ್ತ್. ಅವಳು ಅನ್ನದ ತಟ್ಟೆತಂದಾಕನ ನೋಡು ಗೀತಾ ನಿನ್ನ ಅಣ್ಣಂಗೆ ಇಂದ್ State level sportsಲಿ ಎಷ್ಟೊಂದು ಪ್ರೈಜ್ ಸಿಕ್ಕಿಟುತ್ತಾ ಹೇಳಿ ಬಾಡೆ ಬೀರುಲಿ ಮಡ್ಗಿದ್ದ 4 ಚಿನ್ನದ ಮೆಡಲ್‌ನ ತೋರ್ಸಿತ್, ಇಲ್ನೋಡ್, ಇದ್ ನಮ್ಮ ಟೀಂ ಚಾಂಪಿಯನ್ ಶಿಪ್ ಷೀಲ್ಡ್, ಇದ್ ನೋಡ್ ನಂಗೆ ಇಂಡ್ಯೂಜಲ್ ಚಾಂಪಿಯನ್‌ತ್ತೇಳಿ ನಮ್ಮ ಅಧ್ಯಕ್ಷ ಸುಬ್ರಾಯಜ್ಜ ಕೊಟ್ಟ 2000 ರೂ, ನಗದ್ ಹಣ ಗೊತ್ತಾತಾ ಈಗ ನಿಂಗೆ ನಿನ್ನ ಅಣ್ಣನ ತಾಕತ್ ಎಷ್ಟ್ ಉಟ್ಟತಾ? ಹೇಳಿ ಎದೆ ಉಬ್ಬಿಸಿ ತೋರ್ಸಿತ್. ಇದನೆಲ್ಲಾ ನೋಡ್ದ ತಂಗೆ ಅಣ್ಣನ ಎದೆ ಒಳಗೆ ಹೊಕ್ಕು ಗಳಗಳನೆ ಮರಟೇ ಬುಡ್ತ್ ಮತ್ತೆ ಬಿಕ್ಕಳಿಸಿಕಂಡ್ ಪಪ್ಪ ಏನೊಂದೂ ವಿಚಾರಿಸದೆ ನಿನ್ನ ಈ ಗೆಲುವಿನ ಜಯಬೇರಿಗೆ ನಾವು ಆರತಿ ಎತ್ತಿ ದೃಷ್ಠಿ ತೆಗ್ದ್ ಒಳಗೆ ಕರಕಂಡ್ ಬರಕಾಗಿತ್, ಆದ್ರೇ ಈ ಹಾಳ್ ಪರಿಸ್ಥಿತಿ ನೋಡ್? ಹೆಂಗೆ ಆಗಿ ಹೋತ್‌ತಾ? ಪಪ್ಪಯಾವುದೋ ಚಿಂತೆಲಿ ನಿನ್ನ ಮೇಲೆ ಸಿಟ್ಟ್ ಮಾಡಿಕಂಡೊ ಅವುಕೆ B.P. ರೈಸ್ ಆಗಿ ಹೋದ್ರೆ ತಲೆಲಿ ಜ್ಞಾನನೇ ಇರ್ದುಲೆ. ನಿಂಗೆ ಒಳ್ಳೆ ಹುಚ್‌ನಾಯಿಗೆ ಬಡ್ದಂಗೆ ಬಡ್ದ್ ಬುಟ್ರೋಲ್ಲಾ ಅಣ್ಣಯ್ಯಾ? ಪಾಪ, ಆ ಶಿಲ್ಪ, ರಾಣಿಗೆ ಕೂಡಾ ಎಷ್ಟೊಂದ್ ಬೇಜಾರ್ ಆಗಿ ಹೋತ್? ಛೇ- ಪಾಪ ಅಣ್ಣಯ್ಯ ಊಟಮಾಡ್ ಅನ್ನ ತಣ್ಣಗೆ ಆಗಿ ಹೋಗೂಟ್ಟು. ಬಾ ಗೀತಾ ನಿನ್ನ ಕೈಯಿಂದಲೇ ನಂಗೆ ಒಂದ್ ತುತ್ ಕೊಡ್. ಇನ್ನ್ ನಾನ್ ಒಂದ್ ತಿಂಗ ಕಳ್ದ ಮೇಲೆ ನಿನ್ನ ಮಖನ ಕಾಂಬಕೆ ಆದು ತೇಳ್‌ಕನ ಗೀತ ಅಣ್ಣನ ಬಾಯಿಗೆ ಅಡ್ಡ ಬೆರಳ್‌ನ ಮಡ್ಗಿತ್ ಗಾಭರಿ, ಆಶ್ಚರ್ಯಲಿ ಎಂತಣ್ಣಯ್ಯ ನೀಹೇಳ್ದು? ತಾ ಕೇಳ್ತ್, ಇಂದೇ ನಾನ್ ಸಿಟಿಗೆ ಹೊರಟೋಳೆ. ಹೆಂಗಾದ್ರ್ ಮಾಡಿ ನಾನ್ ಹಣನ ಸಂಪಾದನೆ ಮಾಡಿಕಂಡೇ ಬಂದನೆ, ನೀನ್ ಮಾತ್ರ ಈ ವಿಷ್ಯನ ಮನೆಲಿ ಯಾರಿಗೂ ಹೇಳ್‌ಬೇಡ. ಏಲ್ಲಿ ಪ್ರಾಮಿಸ್‌ಮಾಡ್ ಯಾರಿಗೂ ಹೇಳ್ದುಲೆ ತಾ ಹೇಳ್‌ಂತ್ತೇಳಿ ತಂಗೆನ ಕೈನ ರಾಜು ಹಿಡ್ಕಂಡತ್. ನನ್ ಬೇಜಾರ್ ಮಾಡ್‌ಬ್ಯಾಡ ನಾನ್ ಎಲ್ಲಿದ್ರೂ ನಿನ್ನ ಮದ್ವೆದಿನ ನಿನ್ನ ಮುಂದೆ ಹಾಜರಾನೆ ಆತಾ ಹಾಂ ಹೋಗು. ನನ್ನ ಸಣ್ ತಂಗೆ ಹೋಗಿ ನಿದ್ದೆ ಮಾಡ್ ತಂಗೆ ಹಾಯ್, ಗುಡ್ ನೈಟ್ ತ್ತಾಹೇಳಿ ಕಳ್ಸಿತ್. ಆಕೊಂಬರೆಲಿ ಮಲಗಿದ್ದ ಅಮ್ಮಂಗೆ ರಾತ್ರಿ ಎಲ್ಲಾ ನಿದ್ದೆನೇ ಬಾತ್‌ಲ್ಲೆ. ಮಂಜ ರಾಜು ಸಮಕ್ಕೆ ಪೆಟ್ಟ್ ತಿಂದದಕ್ಕೆ ಅಮ್ಮನ ಹೊಟ್ಟೆಲಿ ಸಂಕಟ ಕಮ್ಮಿ ಆಗಿತ್‌ಲ್ಲೆ. ಎದ್ದ್ ಹೋಗಿ ಒಂದು ಚೊಂಬು ನೀರ್ ಕುಡ್ದ್ ಬಂದ್ ಮಲಗಿದ್ದೊ. ಆದ್ರೆ ಪಪ್ಪ ಬೋಜಪ್ಪಜ್ಜಂಗೆ ಅಷ್ಟ್ ಹೊತ್ತಿಗೆ ಒಂದ್ ನಿದ್ರೆ ಆಗಿತ್ತ್. ಬೆಳ್ಗಿನ ಜಾವ 3ಗಂಟೆ ಆಗಿತ್ ಜೋಜಪ್ಪನವು ಮಂಜ ಮಲಗಿದ್ದ ಕೈಯ್ಯಾಲೆಕೊಂಬರೆಗೆ ಎದ್ ಬಂದೊ ಪಾಪ ನನ್ನ ಮಂಜಂಗೆ ಹಿಂದೆಮುಂದೆ ವಿಚಾರಿಸದೆ ತುಡ್‌ಗ್ ದನಕ್ಕೆ ಬೊಡ್ದಂಗೆ ಸಿಕ್ಕಾಪಟ್ಟೆ ಹೊಡ್ದ್ ಬುಟ್ಟೆಲ್ಲಾತ ತುಂಬಾ ಬೇಜಾರಾಗಿತ್. ಈಗಲಾದ್ರೂ ಮಂಜನ ಹತ್ರ ಹೋಗಿ ಪಾಪಮಾತಾಡಿ ಸಮಾಧಾನ ಮಾಡ್ರೋಕುತ ಗ್ಯಾನ ಮಾಡಿ ರಾಜುಕೂಸೂ - ಏ ರ್‍ಯಾ ರಾಜು ಮಂಜ ತ ಕರ್ದ್‌ಕಂಡ್ ಅಂವ ಮಲಗಿದ್ದ ಕಟ್ಲ್‌ಹತ್ರ ಬಂದೊ, ಅಲ್ಲಿ ಸದ್ದೇ ಇಲ್ಲೆ ಅಂವನ ಬೆಡ್‌ಶೀಟ್‌ನ ಎಳ್ದ್ ನೋಡ್ದೊ, ಖಾಲಿ ಹಾಸಿಗೆನ ಕಂಡೊ. ರಾಜೂ ರಾಜೂ ಎಲ್ಲಿ ಮಂಜ ನೀನ್? ತಾ ಗಾಭರಿಲಿ ಕರ್ದೊ ಈ ಸದ್ದ್‌ಗೆ ಹೆಣ್ಣ್‌ಗೆ ಕೂಡಾ ಎಚ್ಚರ ಆಗಿ ಅಲ್ಲಿಗೆ ಎದ್ದ್ ಬಂದೊ, ಅಪ್ಪನೂ ಅವ್ವನೂ ಸೇರಿಕಂಡ್ ಮನೆ ಒಳಗೆಲ್ಲಾ ಕತ್ತಲೆಲ್ಲಿ ಕರಕಂಡ್ ಹುಡ್‌ಕಾಡಿದೊ, ಅಷ್ಟೊತ್ತಿಗೆ ಮಗಳು ಗೀತ ಕೂಡಾ ಗಾಭರಿ ಎದ್ದ್‌ಕಣ್ತ್ ಒರ್ಸಿಕಂಡ್ ಎದ್ದ್ ಹೊರಗೆ ಬಾತ್. ಅವಳು ಜೋರಾಗಿ ಮರ್ಡಿಕೆ ಶುರುಮಾಡ್ತ್. ಮರ್‍ಬ್‌ಕಂಡ್ ಹೇಳ್ತ್ ಅಣ್ಣಯ್ಯ ಹೇಳ್ತಿತ್ ಪಪ್ಪಾ ಮೈಸೂರಿಗೆ ಹೊರಟ್ ಹೋನೆತಾ. ಹೆಂಗಾದ್ರೂ ಮಾಡಿ ನಾನ್ ಲಕ್ಷರೂಪಾಯಿ ಸಂಪಾದನೆ ಮಾಡಿಕಂಡೇ ಒಂದ್ ತಿಂಗಳ್ ಒಳಗೆ ಬನ್ನೆ ಖಂಡಿತಾ ನಿನ್ನ ಮದ್ವೆಗೆ ಇರುವ ಒಂದು ಲಕ್ಷ ತಂದ್ ನಿನ್ನ ಮದ್ವೆನ ನಾನೇ ನಿಂತ್ ಕಂಡ್ ಮಾಡಿನೆತಾಹೇಳಿಕಂಡ್ ಮಲ್ಗಿತ್ ಅಂದೆ ಅಂದ್ರೇ ತಾ ಇನ್ನೇನೋ ಹೇಳಿಕೆ ಬಾಯಿ ತೆಗಿಯ ಕಾಕನ ಅಮ್ಮನ ಅಳಿಗಲ್ ಸ್ವರ ಜೋರಾಗಿ ಶುರುಆತ್. ಆಗ ಪಪ್ಪ ಹೇಳ್ತ್ ಛೇಛೇ ಎಂಥ ಕೆಲ್ಸ ಮಾಡಿ ಬುಡ್ತ್ ಈ ಹೈದತಾ? ಹುಚ್ಚ್ ಹಿಡ್ದ ಹೈದ ಒಂದು ತಿಂಗಳ ಒಳಗೆ ಒಂದು ಲಕ್ಷ ತಂತದೆಗಡಾ ಅಂವಾ? ಎಂಥಾ ಬ್ರಾಂತ್ ಇಂವಂಗೆ, ಇಂವಂಗೆ ಯಾರಾದ್ರೂ ಒಂದ್ ಲಕ್ಷ ದುಡ್ಡುನ ಕೈಲಿ ಹಿಡ್ಕಂಡ್ ನಿಂತಿದ್ದವಾ? ಬಾ ಮಂಜಾ ನಿಂಗೆ ಒಂದ್ ಲಕ್ಷ ಕೊಟ್ಟನೆ ತಕಂಡ್ ಹೋಗ್‌ತ್ತೇಳಿ? ಇವಂಗೆ ಹುಚ್ಚ್

19ನೇ ಪುಟಕ್ಕೆ

***************************************************

# ಅರೆ ಭಾಷಿಕ ಗೌಡರ ಮದುವೆ ಒಂದು ವಿಶ್ಲೇಷಣೆ : ಹಿಂದಿನ ಸಂಚಿಕೆಯಿಂದ

(ಹಿಂದಿನ ಸಂಚಿಕೆಯಿಂದ)

ಮದುವೆಯಂಥ ಮುಖ್ಯ ಘಟನೆ ಎಲ್ಲರನ್ನೂ ಒಳಗೊಳ್ಳುವ, ಗೌರವ ಸೂಚಿಸುವ ಕೆಲಸ ಆದ ಅನಂತರ ಧಾರಾಕಾರ್ಯ ನಡೆಯುತ್ತದೆ. ಧಾರೆಗೋಸ್ಕರ ಮದುಮಗ ಚಪ್ಪರದೊಳಗೆ ಬರುತ್ತಿದ್ದಂತೆ ಮುತ್ತೈದೆಯರು 5 ಅಕ್ಕಿ ಆರತಿ ಮಾಡುತ್ತಾರೆ. ಅವುಗಳೆಂದರೆ :

1. ತಾಯಿ ಅಕ್ಕಿ ಆರತಿ 2. ಕಟ್ಟೆಮನೆ ಅಕ್ಕಿ ಆರತಿ
3. ಗ್ರಾಮ ಗೌಡನ ಅಕ್ಕಿ ಆರತಿ 4. ಗ್ರಾಮದ ಅಕ್ಕಿ ಆರತಿ ಮತ್ತು 5. ಕುರ್ದಿ ನೀರಿನ ಅಕ್ಕಿ ಆರತಿ.

ಇಲ್ಲಿ ಅಕ್ಕಿಯ ಆರತಿಯ ಮೂಲಕ ಮದುವೆಯ ಸಮಾರಂಭಕ್ಕೆ ಬಂದ ಎಲ್ಲರನ್ನೂ ಗೌರವಿಸಲಾಗುವುದು. ನೇರವಾದ ನೋಟಕ್ಕೆ ಅದು ಮದುಮಗನಿಗೆ ಸಂದಾಯವಾದರೂ ಪರೋಕ್ಷವಾಗಿ ಅದು ಇಡೀ ಊರನ್ನೇ ಒಳಗೊಳ್ಳುತ್ತದೆ. ಅನಂತರ ಧಾರಾ ಮಂಟಪದೊಳಗೆ ಇರಿಸಲಾದ ಅಕ್ಕಿಯ ಮೇಲೆ ವರನನ್ನು ನಿಲ್ಲಿಸುತ್ತಾರೆ. ವಧುವೂ ಅಕ್ಕಿಯ ಮೇಲೆ ನಿಲ್ಲುತ್ತಾಳೆ. ಇಬ್ಬರ ಮಧ್ಯೆ ಪರದೆಯನ್ನು ಹಿಡಿದು ಮುಹೂರ್ತಕ್ಕಾಗಿ ಕಾಯುತ್ತಾರೆ. ನಿಗಧಿ ಪಡಿಸಿದ ಸಮಯದಲ್ಲಿ ವರನ ಕೈ ಮೇಲೆ ವಧುವಿನ ಕೈಯನ್ನು ಇಟ್ಟು, ವಧುವಿನ ತಂದೆ, ನೀರೆರೆದು ಧಾರೆ ಮಾಡಿಕೊಡುತ್ತಾನೆ ಪ್ರತ್ಯೇಕಿಸಲಾದ ಕಾಲ, ಸ್ಥಳ ಮತ್ತು ಗಂಡು ಹೆಣ್ಣುಗಳು ಒಂದು ಹಂತದಲ್ಲಿ ಐಕ್ಯರಾಗುವುದಕ್ಕೆ ಮುಖ್ಯವಾದ ಎರಡು ಉದ್ದೇಶಗಳಿವೆ.

ಅ. ಈ ದಂಪತಿಗಳ ಭವಿಷ್ಯದಲ್ಲಿ ಒಳಿತಾಗಲಿ ಎಂಬ 'ಮಂಗಳದ ಕಲ್ಪನೆ' ಇದು ಅಲೌಕಿಕ ಸ್ವರೂಪದಲ್ಲಿಲ್ಲ. ಮುಂದಿನ ದಾಂಪತ್ಯದಲ್ಲಿ ಕೆಡುಕುಂಟಾಗದಿರಲಿ ಎಂಬ ಸದಾಶಯ ಹೊಸ ತಲೆಮಾರಿನ ಜೀವನ ಕ್ರಮಕ್ಕೆ ಸಂಬಂಧಿಸಿದೆ.

ಆ. ಧಾರೆ ಹೊಯ್ಯುವ ಘಟನೆಯ ಅನಂತರ ವಧೂವರರು ಹೆಂಡತಿ ಮತ್ತು ಗಂಡರಾಗಿ ಮಾರ್ಪಡುವುದರಿಂದ ವಂಶಾಭಿವೃದ್ಧಿಗೆ ಅನುಮತಿ ದೊರೆತಂತಾಗುತ್ತದೆ. ಪರೋಕ್ಷವಾಗಿ ಆಸ್ತಿಗೆ ಉತ್ತರಾಧಿಕಾರಿಯ ನೇಮಕಾತಿ ನಡೆದಂತೆಯೂ ಆಗುತ್ತದೆ. ಒಕ್ಕಲಿಗರ ಮೂಲವೃತ್ತಿ 'ಒಕ್ಕಲುತನ' ಅಥವಾ ಅಕ್ಕಿಗೆ ಸಂಬಂಧಿಸಿರುವುದರಿಂದ, ಮುಹೂರ್ತದಲ್ಲಿ ಅಕ್ಕಿಗೆ ಒಡೆಯನನ್ನು ಅಧಿಕೃತವಾಗಿ ಒಪ್ಪಿ ಕೊಳ್ಳಲಾಗುತ್ತದೆ. ನೆರೆದವರೆಲ್ಲರೂ ಇದಕ್ಕೆ ಸಾಕ್ಷಿಗಳಾಗುತ್ತಾರೆ. ಇದು ಮುಹೂರ್ತಕ್ಕೆ ಇರುವ ಆರ್ಥಿಕ ಮತ್ತು ಸಾಮಾಜಿಕ ಆಯಾಮವಾಗಿದೆ.[10]

ಮುಹೂರ್ತದ ಸಂದರ್ಭದಲ್ಲಿ ಅನಪೇಕ್ಷಿತ ಘಟನೆ ಏನಾದರೂ ನಡೆದರೆ ಆದರಿಂದ ದಾಂಪತ್ಯಕ್ಕೆ ಕೇಡು ಸಂಭವಿಸುತ್ತದೆ ಎಂಬ ನಂಬಿಕೆಯಲ್ಲಿಯೂ ಭವಿಷ್ಯದ ಬಗೆಗೆ ತೀವ್ರತಮವಾದ ಕಾಳಜಿ ವ್ಯಕ್ತವಾಗುತ್ತದೆ.

ಮದುವೆಯಾದ ನಂತರ ವಧೂವರರನ್ನು ಮಂಟಪದೊಳಕ್ಕೆ ಕುಳ್ಳಿರಿಸಿ ಅವರ ಮೈಮೇಲೆ ಅಕ್ಕಿಯನ್ನು ತಳೆಯುತ್ತಾರೆ. ಮೊಣಕಾಲಿನ ಗಂಟು, ಮೊಳಕೈಗಂಟು, ಭುಜದ ಸಂದುಗಳಿಗೆ ಅಕ್ಕಿಯನ್ನು ತಾಗಿಸಿ ಕೊನೆಗೆ ನೆತ್ತಿಯ ಮೇಲೆ ಅಕ್ಕಿಯನ್ನು ಚೆಲ್ಲುತ್ತಾರೆ. ಕೆಲವು ಸಂದರ್ಭದಲ್ಲಿ ಅಕ್ಕಿಯನ್ನು ಬಾಯಿಗೆ ಇಟ್ಟು ತಿನ್ನಿಸುವುದೂ ಇದೆ. ಇಲ್ಲಿ ಜೀವಧಾತುವಾಗಿರುವ ಮತ್ತು ಉತ್ಪಾದನಾ ಘಟಕವಾಗಿರುವ ಅಕ್ಕಿಯ ಅನಂತ ಶಕ್ತಿಯನ್ನು ನವದಂಪತಿಗಳಿಗೆ ದಾಟಿಸುವ ಸಾಂಕೇತಿಕ ಅಭಿವ್ಯಕ್ತಿಯಿದೆ. ಇದನ್ನು ಒಟ್ಟು ಮದುವೆಯಲ್ಲಿ ಅಕ್ಕಿಗೆ ಇರುವ ಸ್ಥಾನವನ್ನು ಲಕ್ಷಿಸಿ ಇನ್ನಷ್ಟು ವಿವರಿಸಲು ಸಾಧ್ಯ ಉಂಟು.

ವಿವಾಹದ ಹಿಂದಿನ ದಿನ ವಧುವನ್ನು ಶೃಂಗರಿಸುವಾಗ ಆಕೆ ಉಟ್ಟ ಸೀರೆಯ ಒಂದು ತುದಿಗೆ ಒಂದು ಮುಷ್ಠಿಯನ್ನು ಅಕ್ಕಿಯನ್ನು ಕಟ್ಟುತ್ತಾರೆ. ಇದಕ್ಕೆ 'ಮಡಿಲಕ್ಕಿ' ಎಂದು ಹೆಸರು. ಇದನ್ನು ಕಟ್ಟುವಾಗ ಹೆಂಗಸರು ಶೋಭಾನೆ ಪದಗಳನ್ನು ಹಾಡುತ್ತಾರೆ. ಈ ಹಾಡುಗಳು 'ಮಡಿಲಕ್ಕಿ ಪದ'ಗಳೆಂದೇ ಜನ ಪ್ರಿಯವಾಗಿವೆ. ಧಾರೆಯಾದ ನಂತರ ವಧುವು ಗಂಡನ ಮನೆಗೆ ಹೋದ ಮೇಲೆ, ಈ ಮಡಿಲಕ್ಕಿಯನ್ನು ಬೇಯಿಸಿ ಗಂಡನಿಗೆ ಉಣಬಡಿಸಬೇಕು. ಇಲ್ಲಿ 'ಅಕ್ಕಿ'ಯು ವಿವಾಹ ದೊಂದಿಗೇ ಅನುಷ್ಠಾನದ ಅರ್ಥ ಪಡೆದಿರುವುದನ್ನು ಗಮನಿಸಬಹುದು. ಧಾರಾಮಂಟಪಕ್ಕೆ ಮದುಮಕ್ಕಳು ಸುತ್ತು ಬರುವಾಗಲೂ, ಮಂಟಪದ ಮೇಲ್ಛದಿಗೆ ಅಕ್ಕಿಯನ್ನು ತಳೆಯುವಲ್ಲಿಯೂ ಇದೇ ಅರ್ಥವಿದೆ. ಅಕ್ಕಿ ಇಲ್ಲದೆ ಗೌಡರಲ್ಲಿ ಮದುವೆ ಇಲ್ಲ.[11] ಈ ಅರ್ಥದಲ್ಲಿ ಮದುವೆಯು ಅಕ್ಕಿಯ ಒಡೆತನವನ್ನು ಮತ್ತು ಅನಂತ ಶಕ್ತಿಯನ್ನು, ಹೊಸ ತಲೆಮಾರಿಗೆ ವರ್ಗಾಯಿಸುವ ಒಂದು ಪ್ರಕ್ರಿಯೆಯಾಗುತ್ತದೆ.

ಧಾರೆಯಾದ ಅನಂತರ ಮದುಮಕ್ಕಳು ಮನೆತನದ ಹಿರಿಯರ ಕಾಲು ಸ್ಪರ್ಶಿಸುವ ಗೌರವ ಸೂಚಿಸಬೇಕು. ಇದಕ್ಕೆ 'ಮರ್ಯಾದೆ ಕೊಡುವುದು' ಎಂದು ಹೆಸರು. ಈ 'ಮರ್ಯಾದೆ ಕೊಡುವ' ಕ್ರಿಯೆಯ ಮೂಲಕ ಪ್ರತ್ಯೇಕಿಸಲ್ಪಟ್ಟು ಮದುವೆಯಾದ ದಂಪತಿಗಳು ಮತ್ತೆ ಸಹಜ ಜೀವನ ಕ್ರಮಕ್ಕೆ ಹಿಂದಿರುಗುತ್ತಾರೆ. ಅಲ್ಲದೆ ಹಿರಿಯ ತಲೆಮಾರಿನ ಮೂಲಕ ಇಳಿದು ಬಂದ ಪರಂಪರೆಯ ಅವಿಭಾಜ್ಯ ಅಂಗವಾಗುತ್ತಾರೆ. 'ಕಾಲು ಹಿಡಿಯುವುದು' ಹಿಂದಿನ ತಲೆಗಳೊಡನೆ ತಾವು ಸೇರಿಕೊಳ್ಳುವುದನ್ನು ಸಂಕೇತಿಸುತ್ತದೆ. ದೇಹದಲ್ಲಿ ಕನಿಷ್ಠವಾದುದು ಕಾಲು ಮತ್ತು ಗರಿಷ್ಠವಾದುದು ತಲೆ. ಹಿರಿಯರ ಕಾಲಿಗೆ ಕಿರಿಯರು ತಮ್ಮ ತಲೆಯನ್ನು ಮುಟ್ಟಿಸುವುದರ ಮೂಲಕ ಹಿರಿಯರ ಕನಿಷ್ಠಕ್ಕೆ ತಮ್ಮ ಗರಿಷ್ಠವು ಸಮ ಎಂದು ಸೂಚಿಸಲಾಗುತ್ತದೆ. ಈ ಮದುವೆಯ ಹಿಂದಿನ ದಿನ ಮದುಮಗನ ಸಹಿತವಾಗಿ ಮನೆಯ ಹಿರಿಯರು, ಈಗಾಗಲೇ ಸತ್ತು ಹೋಗಿರುವ 16 ತಲೆಮಾರಿಗೆ ಗೌರವ ಸೂಚಿಸುವ ಸಲುವಾಗಿ 'ಕೋಲೆಗಳಿಗೆ ಇಡುವ' ಕಾರ್ಯಕ್ರಮವನ್ನು ನೆರವೇರಿಸುತ್ತಾರೆ.[12] ಈ ಕಾರ್ಯಕ್ರಮವು ಕೂಡಾ ಜೀವಂತ ಇರುವವರು ಈಗಾಗಲೇ ಆಸ್ತಿಯನ್ನು ಆಳಿ ಸತ್ತು ಹೋದ ಹಿರಿಯರ ಪರಂಪರೆಯನ್ನು ಮುಂದುವರಿಸುವ ಆಶಯವುಳ್ಳದ್ದಾಗಿದೆ. ಹಿರಿಯರಿಂದ ಮದುವೆಯ ಮೂಲಕ ಹೊಸ ತಲೆಮಾರಿಗೆ ಮತ್ತೆ ದಾಟಿಬರುತ್ತದೆ. ಮದುವೆ ಇಲ್ಲದೆ ಪರಂಪರೆ ದಾಟಿ ಬರಲು ಸಾಧ್ಯವಿಲ್ಲ. ಇದರ ಜೊತೆಗೆ ಮದುವೆಯ ಮೂಲಕ ಪರಂಪರೆಯ ಜವಾಬ್ದಾರಿ ಹೊತ್ತ ಮದುಮಗ, ತನ್ನ ಮನೆಯೊಳಕ್ಕೆ ನುಗ್ಗುವ

*****************************************************

ಮುನ್ನ ತಂಗಿಯ ಮಗನಿಗೆ ತನ್ನ ಮಗಳನ್ನು ಕೊಡುತ್ತೇನೆಂಬ ಭರವಸೆ ಕೊಡುವುದರ ಮೂಲಕ, ಇನ್ನೂ ಹುಟ್ಟದ ಮಗುವಿನ ಭವಿಷ್ಯದ ಬಗ್ಗೆಯೂ ತೀರ್ಮಾನ ತಗೊಳ್ಳುತ್ತಾನೆ.[13] ಇದನ್ನು ಒಟ್ಟಿನಿಂದ ಗಮನಿಸಿದರೆ ಗೌಡರ ಮದುವೆ ಕನಿಷ್ಠ 19 ತಲೆಮಾರುಗಳ ಬಗ್ಗೆ ನಿರ್ಣಾಯಕವಾದ ಮಾತುಗಳನ್ನು ಮೌನವಾಗಿಯೇ ಹೇಳುತ್ತದೆ.

ಧಾರೆಯಾದ ನಂತರ ಎರಡು ಆಚರಣೆಗಳಿವೆ :

೧. ಭೂಮಿಕ್ಕುವ ಶಾಸ್ತ್ರ ೨. ನಾಗೋಲಿ ಶಾಸ್ತ್ರ

ಮೊದಲನೆಯದು 'ಭೂಮಿಗೆ ಇಕ್ಕುವ' ಆಚರಣೆಗೆ ಸಂಬಂಧಿಸಿದೆ. ಇಲ್ಲಿ ವಧೂವರರು ಹಾಲು ಮತ್ತು ತುಪ್ಪವನ್ನು ಕೈ ಬೆರಳುಗಳ ಮೂಲಕ ಭೂಮಿಗೆ ಸಿಂಪಡಿಸಬೇಕು. ಈ ಮೂಲಕ ಅಕ್ಕಿಯನ್ನು ಅಥವಾ ಆಹಾರವನ್ನು ಬೆಳೆಯುವ ಭೂಮಿಗೆ ಗೌರವ ಸಲ್ಲಿಸಲಾಗುವುದು.[14] ನಾಗೋಲಿ ಶಾಸ್ತ್ರದಲ್ಲಿ ವಧೂವರರು ಪರಸ್ಪರ ಅರಸಿನ ನೀರನ್ನು ಸಿಂಪಡಿಸಿಕೊಂಡು, ಒದ್ದೆಯಾಗಿ ಅನಂತರ ಹಾಲು ಬರುವಂಥ ಹಾಲೆ ಮರದ ಗಿಡವನ್ನು ತಂದು ನೆಲದಲ್ಲಿ ನೆಟ್ಟು ಅದಕ್ಕೆ ಗೊಬ್ಬರವನ್ನು ಹೊತ್ತು ತಂದು ಹಾಕುತ್ತಾರೆ. ವಂಶಾಭಿವೃದ್ಧಿ ಮತ್ತು ಆಹಾರ ಪೂರೈಕೆಯ ಎರಡು ಆಶಯಗಳು ಇಲ್ಲಿ ಅದ್ಭುತವಾಗಿ ಮೇಳವಿಸಿವೆ.

ಮದುವೆಯ ನಿಮಿತ್ತವಾಗಿ ಹಾಕುವ 'ಊಟ'ದಿಂದಾಗಿ ಹೆಣ್ಣಿನ ಕಡೆ ಮತ್ತು ಗಂಡಿನ ಕಡೆಯವರು ಒಂದೇ ಆಹಾರ ಸೇವಿಸುವ ಒಂದಾಗುವ ಭಾವಕ್ಕೆ ಪಕ್ಕಾಗುತ್ತಾರೆ. ಅಂದರೆ ತಮ್ಮಲಿದ್ದ ಭಿನ್ನತೆಯನ್ನು ಮರೆತು ಊಟದಮಟ್ಟಿಗೆ 'ಕುಟುಂಬ'ದವರಾಗುತ್ತಾರೆ. ಮದುವೆಯಿಂದ ಊಟವನ್ನು ಪ್ರತ್ಯೇಕಿಸಲಾಗದ ಸ್ಥಿತಿ ಇದೆ.

ಮದುವೆಯ ಬಗೆಗಿನ ಈ ನಿಷ್ಠೆ ಗೌಡರಲ್ಲಿ ಬಳಕೆಯಲ್ಲಿರುವ 'ಕೊಲೆಮದುವೆ'ಯಲ್ಲಿ ಇನ್ನಷ್ಟು ನಿಚ್ಚಳವಾಗಿ ಅಭಿವ್ಯಕ್ತಿ ಹೊಂದಿದೆ. ಮದುವೆಯಾಗದೆ ಸತ್ತ ಹುಡುಗ, ಮತ್ತು ಮದುವೆಯಾಗದೆ ಸತ್ತ ಹುಡುಗಿ ಇವರನ್ನು ಆಯ್ದು, ಜೀವಂತ ವ್ಯಕ್ತಿಗಳಿಗೆ ಹೇಗೆ ಮದುವೆ ಮಾಡುತ್ತಾರೋ ಅದೇ ರೀತಿ (ಬಳಿ ಸಂಬಂಧ, ಹುಡುಗಿ ನೋಡುವುದು, ನಿಶ್ಚಯ, ಧಾರೆ, ಊಟ ಇತ್ಯಾದಿ) ಮದುವೆ ಮಾಡುತ್ತಾರೆ. ಸತ್ತವರನ್ನು ಮೂರ್ತಗೊಳಿಸಲು, ಹಾಲೆಮರದ ಅಥವಾ ಬೈಹುಲ್ಲಿನ ಅಥವಾ ಬಾಳೆ ಗಿಡದ ತೊಗಟೆಯಿಂದ ವಧೂವರರ ಆಕೃತಿಯನ್ನು ಮಾಡುತ್ತಾರೆ. ಮನೆ ಅಥವಾ ಹಲಗೆಯಲ್ಲಿ ಚಿತ್ರ ಬರೆಯುವ ಕ್ರಮವೂ ಇದೆ. ಮನೆಯ ಒಳಗೂ ಅಲ್ಲದ ಹೊರಗೂ ಅಲ್ಲದ 'ಸೂರಡಿ' (ಸೂರಿನ ಅಡಿ, ಮಾಡಿನಿಂದ ನೀರು ಬೀಳುವ ಜಾಗ)ಯಲ್ಲಿ ಧಾರೆ ನಡೆಯುವುದೊಂದು ವಿಶೇಷ. ಗೌಡ ಸಂಸ್ಕೃತಿಯಲ್ಲಿ ಮದುವೆಗಿರುವ ಸ್ಥಾನವನ್ನು 'ಕೊಲೆಮದುವೆ' ಸಾಂಕೇತಿಕವಾಗಿ ವಿವರಿಸುತ್ತದೆ.

ಒಟ್ಟಿನಿಂದ ಗೌಡರ ಮದುವೆ ಕ್ರಮವು ಆ ಜನಾಂಗದ ಸಾಂಸ್ಕೃತಿಕ ದೃಷ್ಟಿಕೋನವನ್ನು ಸಾಂಕೇತಿಕವಾಗಿ, ಸಮರ್ಥವಾಗಿ ಅಭಿವ್ಯಕ್ತಿಸುತ್ತದೆ. ಅದನ್ನು ಹೀಗೆ ಸಂಗ್ರಹಿಸಿ ಕೊಡಬಹುದು.

1. ಪುನರಾವರ್ತನೆಗೊಳ್ಳುವ ಮದುವೆ ಸಂಬಂಧಗಳೇ ಗೌಡರ ಇತಿಹಾಸದ ಪ್ರಾಮುಖ್ಯ ಅಂಶವನ್ನು ನಿರ್ಧರಿಸಿದೆ.

2. ಮದುವೆ ಆಚರಣೆಗೂ ಅಕ್ಕಿಗೂ ಗಾಢವಾದ ಸಂಬಂಧ ಇದ್ದು, ಉತ್ಪಾದನಾ ವಿಧಾನಗಳು ಮದುವೆಯ ಒಟ್ಟು ರಚನೆಯನ್ನು ನಿಯಂತ್ರಿಸಿದೆ. ಹಾಗೇ ಸಂಸ್ಕೃತಿಯ ಇತರ ಅಂಶಗಳನ್ನು ಕೂಡ.

3. ತಂದೆ ಮತ್ತು ತಾಯಿಯ ಬಳಿಗಳೇ ಆದರ್ಶವಾಗಿರುವ ಹಿನ್ನೆಲೆಯಲ್ಲಿ ಬಳಿಯೇ ಗೌಡರ ಪ್ರಧಾನ ಮಾನದಂಡ. ಇದರ ವ್ಯಾಪ್ತಿ ಜಾತಿಗಿಂತ ಬೇರೆಯದಾಗಿದೆ.

4. 'ಉಂಬೋಳಗೆ' ಮತ್ತು 'ಜಗಲಿ' ಗೌಡರ ವಾಸ್ತುವಿನ ಮುಖ್ಯ ಘಟಕಗಳು. ಇದು 'ಕುಟುಂಬದ'ದ ನಿರ್ಧಾರದಲ್ಲಿ ನಿರ್ಣಾಯಕ ಪಾತ್ರವಹಿಸುತ್ತದೆ. ಇವೆರಡೂ ಇಲ್ಲದೆ ಮದುವೆ ನಡೆಯದು, ಗೌಡರ ಜೀವನ ನಡೆಯದು.

5. ಅಣ್ಣ ತಂಗಿಯರ ಮಧ್ಯೆ ಮದುವೆ ನಡೆಯಬಾರದು. ಪ್ರಧಾನ ನಿಷೇಧ ಇಲ್ಲಿದೆ.

6. ಹುಟ್ಟಿನಿಂದ ಸಾಯುವಲ್ಲಿವರೆಗೆ ಮತ್ತು ವರ್ಷದಿಂದ ವರ್ಷಕ್ಕೆ ನಡೆಯುವ ಅನೇಕ ಆಚರಣೆಗಳಲ್ಲಿ ಅಕ್ಕಿ ಮತ್ತು ಅರಸಿನಕ್ಕೆ ಪ್ರಧಾನ ಸ್ಥಾನವಿದೆ. ಅವೆರಡೂ ಮದುವೆಯಲ್ಲಿ ಅತ್ಯಂತ ಅಗತ್ಯವಾದುವು. ಹಸಿವು ಮತ್ತು ಕಾಮದ ಪೂರೈಕೆಯೇ ಈ ಸಂಸ್ಕೃತಿಯ ನಿರ್ಮಾತೃಶಕ್ತಿಗಳಾಗಿರುವುದು, ಇದರಿಂದ ಸ್ಪಷ್ಟ.

7. ಮಧ್ಯಕಾಲೀನ ರಹಸ್ಯ ತಾಂತ್ರಿಕ ಪಂಥಗಳ ಆಚರಣೆಯೆಲ್ಲವೂ ಹಸಿವು ಮತ್ತು ಕಾಮದ ಸುತ್ತ ಕೇಂದ್ರೀಕೃತವಾಗಿದ್ದು ಅದಕ್ಕೂ ಗೌಡರಿಗೂ ಸಂಬಂಧ ಇರುವುದು, ಗೌಡರ ಮದುವೆಯಲ್ಲಿಯೇ ಸ್ಪಷ್ಟ. ಗೌಡರ ಧಾರ್ಮಿಕ ದೃಷ್ಟಿ ಕೋನವು ಇದರ ಸುತ್ತೇ ಇದೆ.

8. ಗೌಡ ಜನಪದ ಸಾಹಿತ್ಯದಲ್ಲಿ ಹೆಚ್ಚು ಒತ್ತು ಬಿದ್ದಿರುವ ಕೌಟುಂಬಿಕ ಭಾವಗಳು ಮತ್ತು ಸಂಬಂಧಗಳನ್ನು ಅಧಿಕೃತವಾಗಿ ಮದುವೆಯೇ ನಿರ್ಧರಿಸುತ್ತದೆ.

ಹೀಗೆ ಅನ್ನ ಮತ್ತು ಸಂತಾನ ಗೌಡ ಸಂಸ್ಕೃತಿಯನ್ನು ನಿರ್ಮಿಸಿದೆ. ಬಹುಶಃ ಬಹುತೇಕ ಸಂಸ್ಕೃತಿಗಳನ್ನು ಕೂಡಾ.

**ಕೊನೆ ಟಿಪ್ಪಣಿಗಳು**

10. ಈ ಅರ್ಥದಲ್ಲಿ ಎಂ. ಎನ್. ಶ್ರೀನಿವಾಸ್ ಹೇಳುವ 'ಸಂಸ್ಕೃತೀಕರಣ' ಇಲ್ಲಿ ನಡೆದಿಲ್ಲ.

11. ಗೌಡರ ಧಾರ್ಮಿಕ ಸಂಪ್ರದಾಯದಲ್ಲಿ ಭತ್ತವನ್ನು ಕ್ರಿಮಿ ಕೀಟಗಳಿಂದ ರಕ್ಷಿಸುವ 'ಗೊರವ'ನಿಗೆ ವಿಶೇಷ ಸ್ಥಾನವಿದೆ. ಮಧ್ಯಕಾಲೀನ ಕರ್ನಾಟಕದ ರಹಸ್ಯ ತಾಂತ್ರಿಕ ಪಂಥಗಳಲ್ಲಿ ಹಸಿವು ಮತ್ತು ಕಾಮದ ಪೂರೈಕೆಗೆ ಅಕ್ಕಿ ಮತ್ತು ಹೆಣ್ಣನ್ನು ಬಳಸುತ್ತಿದ್ದು, ಇದರಿಂದ ಒಕ್ಕಲಿಗರು ವಿಶೇಷವಾಗಿ ಪ್ರಭಾವಿತರಾಗಿದ್ದಾರೆ. ಸಿದ್ಧವೇಷದ ಕುಣಿತ, ಪುರುಷ ಭೂತದ ಆರಾಧನೆಯಲ್ಲಿ ಇದು ಸ್ಪಷ್ಟವಾಗುತ್ತದೆ.

12. ಇಲ್ಲಿ ಹಿಂದಿನ ತಲೆಮಾರುಗಳ ಸಂಖ್ಯೆ 16 ಮಾತ್ರ ಏಕೆಂದು ನನಗೆ ತಿಳಿಯದು. ಸತ್ತು 16 ದಿನಗಳ ಅನಂತರವೂ ಇದೇ 16 ಕೊಲೆಗಳಿಗೆ ಗೌರವ ಸೂಚಿಸಿ, ಸತ್ತವನನ್ನು ಅವರೊಂದಿಗೆ ಸೇರಿಸಲಾಗುವುದು. ಆಗ ಒಬ್ಬ ಹೆಚ್ಚು ಸೇರಿದ್ದರಿಂದ ಮೊದಲ 16ರಲ್ಲೆ ಒಂದು ಎಲೆಯನ್ನು ಹೊರಗೆ ಹಾಕಿ ಒಟ್ಟು ಸಂಖ್ಯೆಯನ್ನು 16ರಲ್ಲಿಯೇ ನಿಲ್ಲಿಸುತ್ತಾರೆ. ಇದರ ಔಚಿತ್ಯವೇನೆಂದು ನಾನು ಹೇಳಲು ಅಸಮರ್ಥನಾಗಿದ್ದೇನೆ.

*************************************************

13. ಗೌಡ ಜನಪದ ಸಾಹಿತ್ಯದುದ್ದಕ್ಕೂ (ಮುಖ್ಯವಾಗಿ ಮದುವೆ ಹಾಡುಗಳಲ್ಲಿ) ತಂಗಿ ಮತ್ತು ತಂಗಿಯ ಮಕ್ಕಳ ಬಗ್ಗೆ ವಿಶೇಷ ಉಲ್ಲೇಖ ಇರುವುದು ಈ ಕಾರಣಕ್ಕೆ. ಆಕೆ ಮದುವೆಗೆ ಬರಲೇ ಬೇಕಾಗುತ್ತದೆ.

ಉದಾ : ಮದುವೆ ಹಾಡೊಂದರಲ್ಲಿ ಅಕ್ಕನನ್ನು ಕರೆಯಲು ಹೊರಟು ಬಂದ ಅಣ್ಣನ ವರ್ಣನೆ :

"ಸೂಡಿ ಸೂಡಿ ವೀಳ್ಯವ ತೆಗೆದಾನು ಅಣ್ಣಯ್ಯ
ಕೀಲೆ ಕೀಲೆ ಅಡಿಕೆ ತೆಗೆದಾನು
ಅಕ್ಕನ ಕರೆಯಲಿಕೆ ಹೊರಾಟನು ಅಣ್ಣಯ್ಯ
ಸಣ್ಣಕ್ಕಿ ಬಯಲಲ್ಲಿ ನಡೆದಾನು"

14. ಖೆಡ್ಡಾಸದ ದಿನದಂದು ಕೂಡ ಭೂಮಿಗೆ ವಿಶೇಷ ಗೌರವ ಸಲ್ಲಿಸಲಾಗುವುದು. ಆದಿನ ಭೂಮಿತಾಯಿ ಮುಟ್ಟಾಗುವಳೆಂಬ ನಂಬಿಕೆ ಗೌಡರಲ್ಲಿದೆ. ಆ ದಿನದಿಂದ ಮುಂದೆ ಕೃಷಿ ಕೆಲಸ ಆರಂಭವಾಗುವುದರಿಂದ ಇಡೀ ಆಚರಣೆಯಲ್ಲಿ ಭೂಮಿಯನ್ನು ಹೆಣ್ಣಾಗಿ ಕಂಡು, ಫಲವಂತಿಕೆಗೆ ಸಂಕೇತವಾಗಿ ಬಳಸಿಕೊಳ್ಳಲಾಗಿದೆ.

ಕೃಪೆ : ಕರಾವಳಿ ಜಾನಪದ
ಲೇಖನ : ಡಾ. ಪುರಷೋತ್ತಮ ಬಿಳಿಮಲೆ

---

**16ನೇ ಪುಟದಿಂದ**

ಹಿಡ್ಡದಲ್ಲೆ ನಂಗೆ ಕೂಡಾ ಹುಚ್ಚ್ ಹಿಡ್ಸಿ ಹೋದಂಗಾತ್, ಅಯ್ಯೋ ಶಿವನೆ ಈಗ ನಾನೊಬ್ಬನೆ ಈ ಮದುವೆ ಕಾರ್ ಬಾರ್‌ನ ಹೆಂಗೆ ಮಾಡ್ಬೊಪ್ಪಾ, ವಯಸ್ಸಾದ ಅಪ್ಪಂಗೆ ಕಷ್ಟ ಆದೆತಾ ಸನ ಇಂವ ಗ್ಯಾನ ಮಾಡ್ತ್‌ಲಲ್ಲೇ ಶಿವನೇತ್ನೇಳಿಕಂಡ್ ತಲೆಮೇಲೆ ಕೈ ಹೊತ್ತ್‌ಕಂಡ್ ಆ ಕತ್ತಲೆಲಿ ಕಯ್ಯಾಲೆ ಕಟ್ಟೊಳೆ ಮೇಲೆ ಕುದ್ದುಕಂಡ್ ರೈಸ್ ಆಗುತ್ತಿರುವ B.P.ನ ಕಂಟ್ರೋಲ್ ಮಾಡಿಕೆ ಪ್ರಯತ್ನ ಪಡುತಿದ್ದೊ. ಮಗಳು ಗೀತಾ ಪಪ್ಪನ ಸಮಾಧಾನ ಪಡ್ಸಿಕೆ ಪ್ರಯತ್ನ ಮಾಡ್‌ತಾ ಅಣ್ಣಯ್ಯ ರಾಜುಗೆ ನೆನ್ನೆ ದಿನ ಸಿಕ್ಕಿದ ಮೆಡಲ್‌ಗಳ ವಿಚಾರನ, ಚಾಂಪಿಯನ್ ಷಿಪ್, ಮತ್ತೆ ಸುಬ್ರಾಯ ಅಜ್ಜ ಖುಷಿ ಪಟ್ಟ್ ಕೊಟ್ಟಂತಹ ಬಹುಮಾನದ ಸಂಗತಿನ ಎಲ್ಲಾ ಹೇಳಿ ಬೇಜಾರ್ ಮಾಡ್ ಬ್ಯಾಡ ಪಪ್ಪ ನನ್ನ ಅಣ್ಣಯ್ಯಂಗೆ ನನ್ನ ಮೇಲೆ ಅದೆಸ್ಟ್ ಪ್ರೀತಿಉಟ್ಟು ಗೊತ್ತುಟಾ? ಅಂವ ದುಡ್ ಸಂಪಾದನೆ ಮಾಡಿಕಂಡ್ ಬಾರದಿದ್ದರೂ ಮದುವೆ ದಿನಕ್ಕೆ ಮಾತ್ರ ಕಂಡಿತಾ ಬಂದದೆ ಗಡ, ನೀನ್ ಮಾತ್ರ ಆ ಮಡಿಕೇರಿಲಿ ಇರುವ ಅಂಗಡಿನ ಈ ಮದ್ವೆಗೋಸ್ಕರ ಮಾರುದು ಬೇಡತಾ ಹೇಳಿಕೆ ಹೇಳಿಟ್ಟು, ತಾ ಹೇಳಿ ಅಲ್ಲೇ ಬೀರುಒಳಗೆ ಮಾಡ್ಗಿದ ಎಲ್ಲಾ ಮೆಡ್ಲ್‌ಗಳನ್ನ, ಷೀಲ್ಡ್‌ಗಳನ್ನ ತೆಗ್ದ್ ತೋರ್‌ಸ್ತ್.

ಇದನೆಲ್ಲಾ ಕಣ್ಣ್‌ತುಂಬಾ ನೋಡಿದ ಬೋಜಪ್ಪಜ್ಜನ ಕಣ್ಣಿಂದ ನೀರ್ ಹನಿ ಉದ್‌ರಿತ್. ಒಂದ್ ಘಳಿಗೆ ಎದೆ ತುಂಬಿ ಬಂದ್ ಸಂತೋಷ ಆಗಿ ಬೇಷ್ ನನ್ನ ಮಂಜ ರಾಜು, ಗಟ್ಟಿಗ ತೇಳಿಕಂಡೊ. ಆದ್ರೇ ಪಕ್ಕನೆ ಅವು ಅವರ ಎರಡ್ ಅಂಗೈನೇ ನೋಡಿಕಂಡ್ ಈ ಹಾಳಾದ ಕೈಯಿಂದ ತಾನೇ ನನ್ನ ಮಂಜಂಗೆ ತಾರಮಾರಾ ಹೊಡ್ದ್ ಬುಟ್ಟದ್ ಈ ಕೈಯಿಂದ ತಾನೆ? ತಾ ಹೇಳಿಕಂಡ ಅಂಗೈ ಮೇಲೆ ಕಣ್ಣ್‌ನೀರ್‌ನ ಸುರ್ಸಿದೊ.

(ಮುಂದ್‌ವರ್ದದೆ)

ಶಂಕರನ ಮುತ್ತಪ್ಪ ಬಸಪ್ಪ

**13ನೇ ಪುಟದಿಂದ**

ಅಳಬೇಕು ಅಂತ ಅನಿಸುತ್ತಿಲ್ಲ !

ಅವರಿಗೆ ಯಾವ ರೀತಿಯ ಫೀಲಿಂಗ್ ಇಲ್ಲ ! ಸತ್ತಿರೋದು ಬೇರೆ ಯಾರು ಅಲ್ಲ ಅರುಂಧತಿ ! ಎಡತೊರೆ ಮನೆತನದ ಹಿರಿಯ ಮಗಳು!

ಪ್ರಸನ್ನ ಸ್ಪಂಧಿಸುತ್ತಿಲ್ಲ !

ಕಣ್ಣುಗಳಲ್ಲಿ ವೈಚಾರಿಕ ಆನಂದ ಇದೆ ! ಅವನತ್ತ ನೋಡಿದ ರೇವತಿ ಅವನ ಕಣ್ಣುಗಳಲ್ಲಿ ಈ ತೆರನಾದ ಭಾವವನ್ನು ಗುರುತಿಸಿದಳು

ಇದು ಎಡತೊರೆ ಮನೆತನದ ಎರಡನೆಯ ಸಾವು ! ಕೆಲವು ದಿನಗಳ ಹಿಂದೆ ಅರುಂಧತಿಯ ಗಂಡ.ಮಂಜಯ್ಯ ಇದೇ ರೀತಿ ಸತ್ತಿದ್ದನು !

ಸಮಯ ಉರುಳುತ್ತಿತ್ತು !

ಹಾವುಗಳು ಈಗ ಒಂದೊಂದಾಗಿ ಅವಳ ದೇಹದಿಂದ ಹರಿದು ಹುತ್ತದ ಕಡೆ ನುಗ್ಗಿದವು !

ಅದೊಂದು ಭಯಾನಕ ದೃಶ್ಯ !

ನೆಲದ ಮೇಲೆ ಹತ್ತಾರು ಹಾವುಗಳು ಹರಿದಾಡುತ್ತಿದ್ದರೆ ಎಂತಹ ಧೈರ್ಯ ಶಾಲಿಯಾದರೂ ಹೆದರಲೇ ಬೇಕು !

ಜನಗಳು ನಡುಗುತ್ತಿದ್ದಾರೆ.

ರೇವತಿಗೆ ಕೆಲವು ಸಂದೇಹ ಬಂದಿದೆ. ಪ್ರಸನ್ನ ಈಗ ಹೆಣವನ್ನು ಎತ್ತಿಕೊಂಡನು.

ರೇವತಿ ಹತ್ತಿರದಿಂದ ನೋಡಿದಳು !

ಹೆಣದ ಮುಖದಲ್ಲಿ ಭಯದ ಛಾಯೆ !

ಹತ್ತಾರು ಸರ್ಪಗಳು ದೇಹದ ತುಂಬಾ ಸುತ್ತಿಕೊಂಡಿದ್ದರೂ ಯಾವುದು ಕಚ್ಚಿದಂತೆ ಕಾಣುತ್ತಿರಲಿಲ್ಲ !

ವಿಷ ಏರಿರಲಿಲ್ಲ !

ಇದೇ............ಇದೇ........ಅರ್ಥವಾಗದ ವಿಚಾರ !?

**(ಮುಂದುವರಿಯುತ್ತದೆ)**

---

## "ಸಂಗಾತಿ"

ಸಂಗಾತಿಗಾಗಿ ನೀ
ಹುಡುಕಾಡ ಬೇಡ ಗೆಳೆಯಾ
ಚಂದಾ ನೀ ಕಟ್ಟಿದರೆ
ಬರುತ್ತಳೆ "ಕೊಡಗು ಸಂಗಾತಿ"
ಮನೆ ಬಾಗಿಲಿಗೆ
ಚಂದಾ ನೀ ಕೇಳದಿದ್ದರೆ
ಬರುತ್ತಾಳೆ "ಬಾಳ ಸಂಗಾತಿ"
ನಿನ್ನ ಬಳಿಗೆ

**ಎಡಿಕೇರಿ ಜಿ. ಜಗನ್ನಾಥ್**
**ಬಲ್ಲಮಾವಟಿ**

************************************************

# ಪತ್ರ ವಿಭಾಗ :



### ಸಂಗಾತಿ-ಗೆಲುವಿನೊಡನೆ

ಪ್ರೀತಿಯ ಸಂಪಾದಕಿ

ಅರೆಗನ್ನಡ ನನ್ನ ಭಾಷೆಯನ್ನಾಡುತ್ತಾ ನನ್ನ ಊರಲ್ಲದೆ ಈ ಬೆಂಗಳೂರಿನಲ್ಲೂ ಸಂಗಾತಿ ನಲಿದಾಡುತ್ತಿದ್ದುದು ಕೊಡಗಿನವಳಾದ ನನಗೆ ಗೊತ್ತಾಗಿದ್ದೇ ಇತ್ತೀಚೆಗೆ. ಗೊತ್ತಾದ ತಕ್ಷಣ ನಾನೇ ಬೆಂಗಳೂರಿನ ಸಂಗಾತಿ ಏಜೆಂಟಗೆ ಫೋನ್ ಮಾಡಿ ವಾರ್ಷಿಕ ಚಂದಾದಾರಳಾದೆ. ಕೊಡಗಿನವಳಾದ ನಾ ನನ್ನ ಭಾಷೆನೇ ಮರೆತಂತೆ ಇರುವಾಗ ಏಜಂಟ್ ಕೂಡ ಅರೆಗನ್ನಡದಲ್ಲಿ ನನ್ನೊಟ್ಟಿಗೆ ಮಾತಾಡಿ ನನ್ನ ಭಾಷೆ ಅಭಿಮಾನನ ಹೆಚ್ಚಿಸಿದೋ. ಇಷ್ಟೊಂದು ದಿನ ನನಗೆ ಇದರ ಬಗ್ಗೆ ಗೊತ್ತಾಗದೇ ಇರುವುದಕ್ಕೆ ನಾನ್ ಆಶ್ಚರ್ಯಪಟ್ಟೆ, ಸಂಗಾತಿ ಓದ್ತಾ ಓದ್ತಾ ಇದ್ದಂತೆ ನನ್ನ ಸಂಬಂಧಿಕ ರೊಡನೆ ಮಾತಾಡಿದಷ್ಟು ಆನಂದವಾಗುತ್ತೆ ಈ ಬೆಂಗಳೂರಿನಲ್ಲಿ. ಆದರೆ ಸಂಗಾತಿ ಅಳಿವು ಉಳಿವಿನ ಪ್ರಶ್ನೆ ಕೊನೆ ಪ್ರಯತ್ನ ಎಂಬ ಸಂಪಾದಕಿಯ ಮನದಳಲನ್ನು ಡಿಸೆಂಬರ್ ತಿಂಗಳಿನ ಸಂಗಾತಿಯಲ್ಲಿ ಓದಿದಾಗ ತುಂಬಾ ವ್ಯಥೆಯಾಯ್ತು. ಸಂಗಾತಿ ಎಂದೂ ಅಳಿಯಬಾರದು ಅದು ಉಳಿಲೇಬೇಕು. ಇದರ ಉಳಿವು ಪ್ರತಿಯೊಬ್ಬ ಅರೆಭಾಷೆ ಗೌಡ ಜನಾಂಗದ ಕರ್ತವ್ಯ. ಇದರ ಉಳಿವು ಅಳಿವಿನ ಬಗ್ಗೆ ವಿಶ್ಲೇಷಿಸಿದಾಗ ಕಂಡುಬರುವುದು ಕೆಲವು ನ್ಯೂನತೆಗಳು. ಇತ್ತೀಚೆಗೆ ಬಂದ ಅನೇಕ ಹೊಸ ಪತ್ರಿಕೆಗಳು ಜನಸಾಮಾನ್ಯರೆಲ್ಲರ ಮನತಟ್ಟಿದೆ ಅಂತಾದರೆ ಸಂಗಾತಿ ಯಾಕೆ ನಮಗೆ ಮತ್ತು ನಮ್ಮಂತಹ ಇನ್ನೂ ಅನೇಕರಿಗೆ ಗೊತ್ತಾಗಿಲ್ಲ ಅನ್ನುವ ಪ್ರಶ್ನೆಯೊಂದು ಮೂಡುತ್ತೆ. ಹೌದು ಪತ್ರಿಕೆ ಅಥವಾ ಹೊತ್ತಿಗೆ ಜನ ಸಾಮಾನ್ಯರ ಅವಿಭಾಜ್ಯ ಅಂಗವಾಗಬೇಕು, ಜನಸಾಮಾನ್ಯರ ಆಸೆಗಳಿಗೆ ಸ್ಪಂದಿಸಬೇಕು, ಅನೇಕ ಅಗತ್ಯಗಳ ಪತ್ರಿಕೆಯ ಹೊಣೆ ಹೊರಬೇಕು. ಹಾಗಿದ್ದರೆ ಖಂಡಿತ ಸಂಗಾತಿಯ ಬಗ್ಗೆ ಮಾಹಿತಿ ಪ್ರತಿ ಭಾಷೆ ಮತ್ತು ಇತರ ಕನ್ನಡ ಗೌಡ ಜನಾಂಗಕ್ಕೆ ತಲುಪುತ್ತೆ. ಸಂಗಾತಿ ತುಳುಗೌಡರನ್ನು ಮರೆತಂತಿದೆ. ಸಂಗಾತಿಯಲ್ಲಿ ಮೂಡಿ ಬರುವ ಕಥೆ, ಕಾದಂಬರಿ, ಜೊತೆಗೆ ಗೌಡ ಜನಾಂಗದ ಬಗ್ಗೆ ಕೆಲವು ಮಾಹಿತಿಗಳು ನಿಜಕ್ಕೂ ಶ್ಲಾಘನೀಯ. ಆದರೆ ಇದರೊಡನೆ ಗೃಹಿಣಿಯರಿಗೆ ಉಪಯೋಗವಾಗುವಂತಹ ಅಡಿಗೆ ತಿಂಡಿಗಳ ಬಗ್ಗೆ ಒಂದು ಕಾಲಂ, ಹಾಗೆ ವರ ವಧುಗಳ ಬಗ್ಗೆ ಮಾಹಿತಿ ಇತ್ಯಾದಿ ಕಾಲಂಗಳಿಂದ ಸಂಗಾತಿ ಅನೇಕರಿಗೆ ಅತ್ಯಗತ್ಯ ಪತ್ರಿಕೆಯಾಗಬಲ್ಲದು. ಬೆಂಗಳೂರಿನಲ್ಲಿ Publish ಆಗುವ Free Ad & Ad mag ಇತ್ತೀಚೆಗೆ ಬಂದರೂ ಅನೇಕ ಸಾಮಾನ್ಯ ಜನತೆಗೆ ಕೂಡ ತಲುಪುವಲ್ಲಿ ಗೆಲುವು ಸಾಧಿಸಿದೆ. ಆದರೆ ಸಂಗಾತಿ ಇಂದು ಅಳಿವು ಉಳಿವಿನ ಮಧ್ಯೆ ತೊಳಲಾಡುತ್ತಿದ್ದಾಳೆ, ಸಂಗಾತಿಯಲ್ಲಿ ಕೆಲಸ, ವಧುವರಗಳ ಬಗ್ಗೆ ಜಾಹಿರಾತುಗಳು ಇನ್ನು ಅನೇಕ attraction ಇರಬೇಕು ವಧುವರಗಳ ಜಾಹೀರಾತು ನಿಜಕ್ಕೂ ಅನೇಕ ಜನ ಗೌಡ ಕುಟುಂಬಕ್ಕೆ ಸಹಾಯ ಮಾಡಿದಂತಾಗುತ್ತದೆ. Deccan Herald ಮತ್ತು ಇತರ ಪತ್ರಿಕೆಗಳಲ್ಲಿ ಜಾಹಿರಾತು ಕೊಟ್ಟು ಬೇರೆ ಜಾತಿಯ ಗೌಡ ಜನಾಂಗದೊಡನೆ ಅಥವಾ ಬೇರೆ ಜಾತಿಯ ಜನಾಂಗದೊಡನೆ ಮದುವೆ ಮಾಡಿಕೊಡುವುದು ಇಂದು ಸಾಮಾನ್ಯ ಮತ್ತು ಅನಿವಾರ್ಯವಾಗಿದೆ. ಅದರ ಬದಲು ಸಂಗಾತಿ ಜೀವನ ಸಂಗಾತಿಯನ್ನು ಹುಡುಕಿಕೊಡುವ ಕೊಂಡಿಯಾದರೆ ಅನೇಕ ಕುಟುಂಬದವರು ಸದಾ ಸಂಗಾತಿಗೆ ಚಿರಋಣಿ. ಜಾಹಿರಾತು ಫ್ರೀ ಅಥವಾ Reasanable rateನಲ್ಲಿ ದೊರೆತರೆ ಖಂಡಿತ ಸಾಕಷ್ಟು ಜನರ ಆಕರ್ಷಣೆಯ ಕೇಂದ್ರವಾಗುತ್ತೆ ಇದರ ಬಗ್ಗೆ ನಮಗೆ ಮಾಹಿತಿ ಬರೆದು ತಿಳಿಸಿದರೆ ನಾವು ನಿಮಗೆ ಚಿರಋಣಿ

**ಹೊಸಮನೆ ಹೇಮ, ಬೆಂಗಳೂರು**

---

ಮಾನ್ಯರೆ,

ಕೊಡಗು ಸಂಗಾತಿ ಡಿಸೆಂಬರ್ 16ರಿಂದ 31,1999ರ ಪತ್ರಿಕೆಲಿ ಶ್ರೀ ಗುಡ್ಡೆಮನೆ ರಮೇಶ್‌ರವು "ನಾಕಂಡಂಗೆ ಕಾವೇರಿನಾಡ್" ಓದಿ ಸಕಲ ಅಭಿಪ್ರಾಯ ಆತ್. ಆದರೆ ಇವು ನಮ್ಮ ಗೌಡ ಸಂಸ್ಕೃತಿಗೆ ಸಂಬಂದಿಸಿದ ಯಾವುದೆ ಐಟಂಗಳ ಪ್ರದರ್ಶನ ಇತ್ತಲೆತೇಳಿ ಬರೆದದ್ದಕ್ಕೆ ನಮ್ಮ ಮನಸ್ಸಿಗೆ ಬಹಳ ಬೇಸರ ಆತ್.

ನಾವು ನಮ್ಮ ಸಂಸ್ಕೃತಿನ ಮುಂದೆ ತರುತ್ತೇಳಿ ಅಮ್ಮಾಜೀರ ಪೊನ್ನಪ್ಪನವು ಬಿಡುಗಡೆ ಮಾಡ್ದಂತಹ ಹಾಡುಗಳಿಗೆ ಬಾರಿ ಸಮಯದಿಂದ ಅಭ್ಯಾಸ ಮಾಡಿ ಕುಪ್ಪಸದಟ್ಟಿ, ಗೇಂಟಿ ಕಟ್ಟಿಸೀರೆ ಉಟ್ಟು ಕಾರ್ಯಕ್ರಮ ಪ್ರದರ್ಶಿಸಿವೊಳೊ ಮತ್ತೆ ಬಿಟ್ಟೀರ ಚೊಂದಮ್ಮ ಶಂಬು ಇವು ಕಾವೇರಮ್ಮನ ಸುಪ್ರಭಾತ ಮಾಡ್ದೊ ಹೊರತ್ ಪದ್ಯ ಅಲ್ಲಾ! ನಮ್ಮ ಮನಸ್ಸಿಗೆ ತಿಳಿದಂತೆ ಇದ್ ಪಾಶ್ಚಿಮಾತ್ಯ ಅನುಕರಣೆ ಅಲ್ಲ. ನಿಮ್ಮ ಮನಸ್ಸಿಗೆ ಈ ಪ್ರದರ್ಶನ ನಮ್ಮ ಸಂಸ್ಕೃತಿಗೆ ವಿರುದ್ಧವಾದಲ್ಲ. ನಮ್ಮ ಸಂಸ್ಕೃತಿಯ ಬಗ್ಗೆ ಹಿರಿಯವರಾದ ನೀವು ತಿಳಿಸಿ ಅಭ್ಯಾಸ ಮಾಡಿಸಿದಲ್ಲಿ ನಾವು ನಮ್ಮ ತಪ್ಪುಗಳನ್ನ ಅರಿತ್ ಮುಂದೆ ಸರಿಯಾದ ಪ್ರದರ್ಶನ ನೀಡಿಕೆ ತಯಾರಾಗಿವೊಳೊ.

ಇನ್ನೊಂದ್ ವಿಷಯ ಏನುಂತ್ತೇಳಿರೆ ನೀವು ನಮ್ಮಲ್ಲಿ ಶಿಸ್ತ್‌ನ ಪ್ರದರ್ಶನದ ಬಗ್ಗೆ ಬರೆದದ್ದನ್ನ ಓದಿ ಮನನೊಂದತ್. ಯಾಕೆಂತೇಳ್ರೆ ಬೆಳಿಗ್ಗೆ 10 ಗಂಟೆಯಿಂದ ಮಾಧ್ಯಾನ 2-45 ಗಂಟೆ ಕಾಲ ಅದೂ ಕೈಲ್ ಮುಹೂರ್ತ ಅಂತ ಸಮಾರಂಭದಲಿ ಮಾನವಾಗಿ ಕೂರಿಕೆ ಯಾವ ಜನಾಂಗದವ್ಕು ಸಾಧ್ಯಇಲ್ಲೆತ್ತೆಳಕ್.

ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಆಹ್ವಾನಿಸ್ಪಟ್ಟಾ ಮಹನೀಯರುಗಳ್ಗೆ ಒಂದು ಕಿವಿಮಾತ್ ದಯವಿಟ್ಟು ನಿಮ್ಮ ಉದ್ದ ಉದ್ದದ ಭಾಷಣಗಳನ್ನ ಮೊಟಕುಗೊಳಿಸಿ ಮೈಯೆಲ್ಲಾ ಕಿವಿಯಾಗಿ ಕುದ್ದು ಆಲಿಸುತ್ತಿದ್ದಂತಹ ಸಭಿಕರ ಪ್ರೀತಿಗೆ ಪಾತ್ರರಾಕುತ್ತೇಳಿ ಕೇಳಿಕೊಂಡವೆ. ಇಲ್ಲದಿದ್ದಲ್ಲಿ ಸಭಿಕರ್ Non verbal communication ಮೂಲಕ ಗಣ್ಯರಿಗೆ ಭಾಷಣ ನಿಲ್ಲಿಸಿಕ್ಕೆ ತಿಳಿಸುವ ವಿಧಾನ ಇದ್ದ್ ಎಲ್ಲಾ ಜನಾಂಗದಲ್ಲಿ ಕಂಡ್ ಬಾದು ಸರ್ವೇಸಾಮಾನ್ಯ. ಇದನ್ನ ಗಣ್ಯರು ಪಾಲಿಸಿದರೆ ಇಂತ ಅಶಿಸ್ತಿನ ವರ್ತನೆ ನಮ್ಮ ಜನಾಂಗಲಿ ಮುಂದಕ್ಕೆ ಬಾಕಿಲ್ಲೆತ್ತೇಳಿ ನಾವು ಬಾವಿಸುವೆ

ವಂದನೆಗಳು,

ತೇನನ **ರಾಜೇಶ್ ಸೋಮಣ್ಣ**, ಬೆಂಗಳೂರು.
ಬಗ್ಗನ ದೀಪಕ್, ಬಿಟ್ಟೀರ ರೀನಾ

**********************************************

## ಕಾಂಗ್ರೆಸಿನ ಮಹಿಳಾ ಕಾರ್ಯದರ್ಶಿಯಾಗಿ ಆಯ್ಕೆ



ಕರ್ನಾಟಕ ಪ್ರದೇಶ ಕಾಂಗ್ರೆಸ್ ಮಹಿಳಾ ಸಮಿತಿಯ ಅಧ್ಯಕ್ಷರಾದ ರಾಣಿ ಸತೀಶ್ ಅವರು ಪಕ್ಷದ ಪ್ರಧಾನ ಕಾರ್ಯದರ್ಶಿಯನ್ನಾಗಿ ಪೇರಿಯನ ಕೇಶವ ಸಾವಿತ್ರಿ ಅವರನ್ನು ನೇಮಿಸಿರುತ್ತಾರೆ. ಅವರನ್ನು ಮಂಡ್ಯ, ಮೈಸೂರು, ಚಾಮರಾಜ ಜಿಲ್ಲೆಯ ವಿಭಾಗಕ್ಕೆ ನೇಮಿಸಲಾಗಿದೆಯೆಂದು ಕೆ.ಪಿ.ಸಿ.ಸಿ. ಮಹಿಳಾ ಸಮಿತಿ ಪ್ರಕಟಿಸಿರುತ್ತದೆ. ಪಿ. ಕೆ. ಸಾವಿತ್ರಿ ಎಂದೆ ಗುರ್ತಿಸುವ ಇವರು ಈ ಹಿಂದೆ ಕೊಡಗು ಜಿಲ್ಲಾ ಮಹಿಳಾ ಕಾಂಗ್ರೆಸ್ ಅಧ್ಯಕ್ಷೆರಾಗಿಯೂ ಡಿ.ಸಿ.ಸಿ. ಉಪಾಧ್ಯಕ್ಷೆರಾಗಿಯೂ ಮತ್ತು ಚೇರಂಬಾಣೆ ಕ್ಷೇತ್ರದಿಂದ ಸ್ಪರ್ಧಿಸಿ ಜಿಲ್ಲಾ ಪಂಚಾಯತ್ ಸದಸ್ಯರಾಗಿಯೂ ಉತ್ತಮ ಸೇವೆ ಸಲ್ಲಿಸಿರುತ್ತಾರೆ. ಶ್ರೀಯುತರು ಜನಾಂಗದ ಹೆಗ್ಗಂಬವೆಂದೆ ಕರೆಯಲ್ಪಡುವ ಚೆಟ್ಟಳ್ಳಿಯ ಕಾಫಿ ಪ್ಲಾಂಟರ್‌ಗಳು, ಸಮಾಜ ಸೇವಕರು ಆದ ದಿ. ಪೇರಿಯನ ಪೂವಯ್ಯನವರ ಸೊಸೆಯಂದಿರು.

**ಸಂಪಾದಕಿ**

## 4ನೇ ಹುಟ್ಟುಹಬ್ಬದ ಶುಭಾಶಯಗಳು



**ಕಟ್ಟೆಮನೆ ಪರ್ವಿನ್ ಗಣಪತಿ**

ನಿನ್ನ 4ನೇ ವರ್ಷದ ಹುಟ್ಟುಹಬ್ಬಕ್ಕೆ ನಮ್ಮ ಪ್ರೀತಿಯ ಆಶೀರ್ವಾದಗಳು

ಯಿಂದ :

**ನಿನ್ನ ಚಾಂಪ, ಚಾಮೆವ್ವ,**
**ತೇನನ ಸೋಮಣ್ಣ ದಂಪತಿಗ, ಮಡಿಕೇರಿ**
**ಮತ್ತೆ ನಿನ್ನ ಮಾವ ತೇನನ ರಾಜೇಶ್, ಬೆಂಗಳೂರು**

## ಶತಮಾನ ಕಂಡ ಅರೆಭಾಷಿಕರ ಮೇರು ವ್ಯಕ್ತಿಗಳು

19ನೇ ಶತಮಾನ ಮತ್ತು 20ನೇ ಶತಮಾನ ಕಂಡ ಜನಾಂಗದ ಮೇರು ವ್ಯಕ್ತಿಗಳ ಪಟ್ಟಿಯನ್ನು ಮಾಡಲು ಸಂಗಾತಿ ಬಯಸಿದೆ. ವ್ಯಕ್ತಿಗಳು ಸಮಾಜ ಸೇವಕ/ರಾಜಕೀಯ/ಐಕ್ಯತೆ/ಸಂಘಟನೆಯಲ್ಲಿ ಸಾಧನೆಗೈದವರಾಗಿಯೂ/ಕಲೆ/ಪ್ರತಿಭೆ/ಕ್ರೀಡೆ/ಪೋಲಿಸು/ಸಿನಿಮಾನಾಟಕ/ಯಕ್ಷಗಾನ/ಐ.ಎ.ಎಸ್./ಐ.ಪಿ.ಎಸ್./ಐ.ಎಫ್.ಎಸ್./ ವಿದ್ಯೆ ಇತ್ಯಾದಿಯಾಗಿರಬೇಕು. ರಾಜ್ಯ ಮತ್ತು ರಾಷ್ಟ್ರಮಟ್ಟದ ಪ್ರತಿಭೆಗಳಾಗಿ ಕೀರ್ತಿ ತಂದ ಅರೆಭಾಷಿಕ ಗೌಡ ಸಮುದಾಯದ ಅರ್ಹ ವ್ಯಕ್ತಿಗಳು ತಮ್ಮ ಮಾಹಿತಿ, ಪರಿಚಯ, ಭಾವಚಿತ್ರದೊಡನೆ ಸಂಗಾತಿಗೆ ದಿನಾಂಕ 5-2-2000ದ ಒಳಗಡೆ ತಲುಪಿಸುವಂತೆ ವಿನಂತಿ. ನಂತರ ಬಂದವುಗಳನ್ನು ಪರಿಗಣಿಸಲಾಗುವುದಿಲ್ಲ.

**ಸಂಪಾದಕಿ**

## 3ನೇ ವರ್ಷದ ಪುಣ್ಯ ಸ್ಮರಣೆ



**ಚೆರಿಯಮನೆ ಐ.ಚಿಣ್ಣಪ್ಪ**
ಜನನ : 17-6-1922 ಮರಣ : 21-1-1997

ನೀವು ನಮ್ಮನ್ನಗಲಿ ವರುಷ ಮೂರು ಸಂದರೂ ಸದಾ ನಿಮ್ಮ ಸವಿನೆನಪು ನಮ್ಮಲ್ಲಿ ಹಚ್ಚ ಹಸುರಾಗಿದೆ. ನಿಮ್ಮ ದಿವ್ಯಾತ್ಮಕ್ಕೆ ಭಗವಂತನು ಚಿರಶಾಂತಿ ಕರುಣಿಸಲಿ ಎಂದು ಪ್ರಾರ್ಥಿಸುವ

**ಪತ್ನಿ : ಶ್ರೀಮತಿ ಮುತ್ತವ್ವ**
**ಮಕ್ಕಳು, ಸೊಸೆ, ಅಳಿಯಂದಿರು ಹಾಗೂ ಮೊಮ್ಮಕ್ಕಳು**

## ಸಜ್ಜನ್ ಮಡಪ್ಪಾಡಿ ರಾಜ್ಯ ಮಟ್ಟಕ್ಕೆ ಆಯ್ಕೆ



ಸಾರ್ವಜನಿಕ ಶಿಕ್ಷಣ ಇಲಾಖೆ ಏರ್ಪಡಿಸಿದ ಮೈಸೂರು ಜಿಲ್ಲಾಮಟ್ಟದ ಚಿತ್ರಕಲಾ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಗಳಿಸಿರುವ ವಿದ್ಯಾರ್ಥಿ ಸಜ್ಜನ್ ಮಡಪ್ಪಾಡಿ ರಾಜ್ಯ ಮಟ್ಟಜ ಚಿತ್ರಕಲಾ ಸ್ಪರ್ಧೆಗೆ ಆಯ್ಕೆಯಾಗಿದ್ದಾನೆ.

ಈ ಮೊದಲು ತಾಲೂಕು ಮಟ್ಟದ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಿಗೆ ಏರ್ಪಡಿಸಿದ್ದ ಚಿತ್ರಕಲಾ ಸ್ಪರ್ಧೆಯಲ್ಲಿ ಸೈಂಟ್ ಜೋಸೆಫ್ ಕಾನ್ವೆಂಟ್ ಶಾಲೆಯ ತರಗತಿಯಲ್ಲಿ ಓದುತ್ತಿರುವ ಸಜ್ಜನ್ ಮಡಪ್ಪಾಡಿ ಪ್ರಥಮ ಸ್ಥಾನ ಗಳಿಸಿದ್ದನು. ಅಲ್ಲದೆ ತಾಲೂಕು ಪತ್ರಕರ್ತರ ಸಂಘ, ಪೋಲೀಸು ಇಲಾಖೆ ಹಾಗೂ ಇನ್ನಿತರ ಸಂಘ ಸಂಸ್ಥೆಗಳು ಏರ್ಪಡಿಸಿದ್ದ ಚಿತ್ರಕಲಾ ಸ್ಪರ್ಧೆಗಳಲ್ಲೂ ಪ್ರಥಮ ಸ್ಥಾನ ಗಳಿಸಿದ್ದನು.

ಇವನು ರಾಧಕೃಷ್ಣ ಮಡಪ್ಪಾಡಿ (ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಅಧಿಕಾರಿ, ಕೆ. ಆರ್. ನಗರ) ಮತ್ತು ಪ್ರಸಾದಿನಿ ಮಡಪ್ಪಾಡಿಯವರ ಪುತ್ರನಾಗಿದ್ದಾನೆ. ಹಾಗೂ ಇವನ ತಾಯಿ ಪ್ರಸಾದಿನಿಯವರು ಮದೆನಾಡಿನ ನೆರಿಯನ ಸೋಮಯ್ಯನವರ ಮಗಳಾಗಿದ್ದಾರೆ.

ಸಂಪಾದಕಿ

## ರ್‍ಯಾವಿನ್ ಟಾಪ್ - 10 ಅಂತರ ಶಾಲಾ ನೃತ್ಯ ಸ್ಪರ್ಧೆಯಲ್ಲಿ - ಪ್ರಥಮ ಸ್ಥಾನ - ಕುಮಾರಿ ಅಂಜಲಿ ಉತ್ತಪ್ಪ




ಡಿಸೆಂಬರ್ 13ರಂದು ಬೆಂಗಳೂರಿನಲ್ಲಿ ನಡೆದ ರ್‍ಯಾವಿನ್ ಟಾಪ್ - 10 ಅಂತರ ಶಾಲಾ ನೃತ್ಯ ಸ್ಪರ್ಧೆಯಲ್ಲಿ ಸಿನಿಮಾ ನಟ ಬಿ. ಸಿ. ಪಾಟೀಲ್ ಮತ್ತು ನಟಿ ಅಖಿಲಾ ಇವರಿಂದ ಪ್ರಥಮ ಬಹುಮಾನವನ್ನು ಪಡೆಯುತ್ತಿರುವ ಕು. ಅಂಜಲಿ ಉತ್ತಪ್ಪ

ರ್‍ಯಾವಿನ್ ಅಸೋಸಿಯೇಷನ್ ಫಾರ್ ರಿಕ್ರಿಯೇಷನ್ ಅವರು ಎ.ಡಿ.ಎ. ಕಲಾಮಂದಿರದಲ್ಲಿ ಡಿಸೆಂಬರ್ 13ರಂದು ನಡೆಸಿದ ಟಾಪ್ - 10 ಅಂತರ ಶಾಲಾ ನೃತ್ಯ ಸ್ಪರ್ಧೆಯಲ್ಲಿ ಮೂಟೇರ ಅಂಜಲಿ ಉತ್ತಪ್ಪ ಇವಳು ಪ್ರಥಮ ಸ್ಥಾನ ಪಡೆದಿರುತ್ತಾಳೆ. ಈಕೆ ಆಕ್ಸ್‌ಫರ್ಡ್ ಶಾಲೆಯಲ್ಲಿ 4ನೇ ತರಗತಿ ಓದುತ್ತಿದ್ದಾಳೆ. ಈಕೆಯು ಮೂಟೇರ ಉತ್ತಪ್ಪ ಮತ್ತು ಜಾಜಮ್ಮ ದಂಪತಿಗಳ ದ್ವಿತೀಯ ಪುತ್ರಿಯಾಗಿರುತಾಳೆ. ಉತ್ತಪ್ಪ ಇವರು ಬೆಂಗಳೂರಿನಲ್ಲಿ ವಕೀಲರು ಮತ್ತು ಭಾರತ ಸರ್ಕಾರದ ನೋಟರಿಯಾಗಿರುತ್ತಾರೆ. ತಾಯಿ ಶ್ರೀ ಜಾಜಮ್ಮ ಇವರು ಇ.ಎಸ್.ಐ. ಆಸ್ಪತ್ರೆಯಲ್ಲಿ ಶುಶ್ರೂಶಕಿ ಆಗಿ ಸೇವೆ ಸಲ್ಲಿಸುತ್ತಿದ್ದಾರೆ. ಅಂಜಲಿ ಈ ಸಲ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಏರ್ಪಡಿಸಿದ ಕೈಲ್ ಮುಹೂರ್ತ ಸಮಾರಂಭದ ನೃತ್ಯಕ್ಕೆ ಮೆಚ್ಚುಗೆ ಗಳಿಸಿದ್ದಾಳೆ.

ಆಟೋಟ ಸ್ಪರ್ಧೆಗಳಲ್ಲಿ ಗಮನ ಸೆಳೆದಿರುವ ಪುಟಾಣಿ. ಎಳೆ ಪ್ರತಿಭೆಯ ಪುಟಾಣಿಗೆ ಕುಲದೇವರು ವೆಂಕಟರಮಣ ಸ್ವಾಮಿ ಸಾಕಷ್ಟು ಉಜ್ವಲ ಭವಿಷ್ಯ ನೀಡಲೆಂದು ಕೊಡಗು ಸಂಗಾತಿ ಮನಃಪೂರ್ವಕವಾಗಿ ಹಾರೈಸುತ್ತದೆ.

ಲೇಖನ : ಕಲ್ಲುಮುಟ್ಲು ಬಸಪ್ಪ, ಬೆಂಗಳೂರು

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ : **0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.